ಶರಣ ಸಾಹಿತ್ಯ ಗ್ರಂಥಮಾಲಾ - ೧೩

# ದುಂಬಿ

(ಕವನ ಸಂಗ್ರಹ)





ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ
**ಬ. ಶಿವಮೂರ್ತಿ ಶಾಸ್ತ್ರೀ**

೧೯೫೧ ಬೆಲೆ, ರೂ. ೧

ಶರಣ ಸಾಹಿತ್ಯ ಗ್ರಂಥಮಾಲಾ-೧೩

# ಡುಂಬಿ

(ಕವನ ಸಂಗ್ರಹ)

ಲೇಖಕರು ಮತ್ತು ಪ್ರಕಾಶಕರು
ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ,
**ಬ. ಶಿವಮೂರ್ತಿ ಶಾಸ್ತ್ರೀ**

೧೯೫೧ ರೂ. ೧

# ಅರಿಕೆ

ಶರಣ ಸಾಹಿತ್ಯ ಗ್ರಂಥಮಾಲೆಯ ೧೩ನೇ ಗ್ರಂಥವಾಗಿ 'ದುಂಬಿ' ಎಂಬ ಈ ಕವನ ಸಂಗ್ರಹವನ್ನು ಪ್ರಕಟಿಸಿ ಮಾನ್ಯ ವಾಚಕರಿಗೆ ಸಮರ್ಪಿಸಲಾಗಿದೆ.

ಈ ಮೊದಲು 'ಯುಗವಾಣಿ'ಎಂಬ ಕವನ ಸಂಗ್ರಹವೊಂದು ನಮ್ಮ ಗ್ರಂಥ ಮಾಲೆಯ ೭ನೇ ಕುಸುಮವಾಗಿ ಪ್ರಕಟವಾಗಿದೆಯಷ್ಟೆ. ಈಗಾಗಲೇ ಹಲವು ವಿಧದಿಂದ ಕನ್ನಡ ಜನತೆಗೆ ಚಿರಪರಿಚಿತರಾದ ನನ್ನ ಪೂಜ್ಯಪಿತೃಗಳು, ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ ವೇ|| ಬ. ಶಿವಮೂರ್ತಿಶಾಸ್ತ್ರಿಗಳು 'ಶೂಲಪಾಣಿ' ಎಂಬ ಕಾವ್ಯನಾಮದಿಂದ ಬೇರೆಬೇರೆ ಕಾಲದಲ್ಲಿ ಬರೆದ ೬೦ ಕವಿತೆಗಳು ಈಸಂಗ್ರಹದಲ್ಲಿ ಪ್ರಕಟವಾಗಿವೆ. ಶ್ರೀ ಶಾಸ್ತ್ರಿಗಳ ಕವಿತೆಗಳನ್ನೆಲ್ಲಾ ಒಂದೆಡೆಗೆ ಕೂಡಿಸಿ ಪ್ರಕಟಿಸಬೇಕೆಂದೂ, ಅದರಿಂದ ಸಾಹಿತ್ಯಕ್ಕೆ ತಕ್ಕಷ್ಟು ಲಾಭವುಂಟೆಂದೂ ಹಲವು ಮಂದಿ ಸಹೃದಯರು ಪಟ್ಟ ಅಭಿಪ್ರಾಯವೇ ಈ ಗ್ರಂಥ ಪ್ರಕಟನೆಗೆ ಮುಖ್ಯ ಕಾರಣವಾಗಿದೆ. ನಮ್ಮ ಇತರ ಗ್ರಂಥಗಳಿಗೆ ಪ್ರೋತ್ಸಾಹವಿತ್ತಂತೆಯೇ ಕನ್ನಡ ಮಹಾಜನರು ಈ ಗ್ರಂಥವನ್ನೂ ಸ್ವಾಗತಿಸುವರೆಂದು ನಂಬಲಾಗಿದೆ.

ವಾಚಕರ ಪ್ರಯೋಜನಾರ್ಥವಾಗಿ ಅನುಬಂಧ ೧ ಮತ್ತು ೨ನ್ನು ಕೊಡಲಾಗಿದೆ.

ತಾ|| ೧೫-೧೨-೧೯೫೧
ಬೆಂಗಳೂರು

ಎಚ್. ಎಸ್. ರೇಣುಕ ಪ್ರಸಾದ್ ಬಿ.ಎ.
ಉಪಸಂಪಾದಕ
(ಶ. ಸಾ. ಗ್ರಂಥಮಾಲಾ)



# ಬಿನ್ನಹ

'ದುಂಬಿ' ಎಂಬ ಈ ಕವನ ಸಂಗ್ರಹವು ಒಲುಮೆಯ ಗೆಳೆಯರನೇಕರ ಬಯಕೆಯ ಫಲವಾಗಿ ಈಗ ಗ್ರಂಥರೂಪದಿಂದ ಹೊರಬಂದಿದೆ. ಸುಮಾರು ೨೫ ವರ್ಷಗಳ ಅವಧಿಯಲ್ಲಿ ನಾನು ಪ್ರಸಂಗ ಒದಗಿದಾಗ, ಸುಂದರ ಪ್ರದೇಶಗಳನ್ನು ಕಂಡಾಗ, ಮನಸ್ಸಿಗೆ ಹುರುಪು ಬಂದಾಗ, ಆಗೊಂದು ಈಗೊಂದರಂತೆ ಬರೆದ ಕವಿತೆಗಳ ಸಂಗ್ರಹವೇ ಇದು. ನನ್ನ ಇತರ ಸಾಹಿತ್ಯ ಸೇವಾಕಾರ್ಯಗಳನ್ನು ಮೆಚ್ಚಿದ ರಸಿಕ ಮಿತ್ರರೇ ಈ ಗ್ರಂಥದ ಪ್ರಕಟನೆಗೂ ಮುಖ್ಯವಾಗಿ ಕಾರಣಕರ್ತರು.

ಈ ಸಂಗ್ರಹದಲ್ಲಿರುವ ಕವಿತೆಗಳೆಲ್ಲವೂ ಒಂದೇಕಾಲದಲ್ಲಿ ಒಂದೇ ಮನೋಧರ್ಮದಲ್ಲಿ ಬರೆದವುಗಳಲ್ಲ. ಅದು ಕಾರಣವೇ ಈ ಕವಿತೆಗಳಲ್ಲಿ ಒಂದಕ್ಕೊಂದಕ್ಕೆ ನಿಕಟ ಬಾಂಧವ್ಯವಿಲ್ಲದಿರುವುದು. ಈ ಸಂಗ್ರಹವು ಕೈಚಳಕವುಳ್ಳ ನಾಗರಿಕನು ಕಟ್ಟಿದ ರಾಜಶೀವಿಯ ಹೂವಿನ ಹಾರವಲ್ಲ. ಅಡವಿಯ ಆಶ್ರಮದ ವಟುವೊಬ್ಬನು ಅರಣ್ಯದಲ್ಲಿ ಸಿಕ್ಕಿದ ಹೂವುಗಳನ್ನು ಕಿತ್ತುತಂದು ಮನಬಂದಂತೆ ಪೋಣಿಸಿದ ಅಸ್ತವ್ಯಸ್ತವಾದ ಪೂಮಾಲೆಯಂತಿದೆ ಎಂಬುದು ಇಲ್ಲಿ ಗಮನಾರ್ಹ.

ಈ ಕವಿತೆಗಳಲ್ಲಿ ಕೆಲವು ಪ್ರಕೃತಿ ವರ್ಣನೆ, ಕೆಲವು ವ್ಯಕ್ತಿಗಳ ಗುಣಗಾನ, ಕೆಲವು ಮನಸ್ಸಿನ ಹಂಬಲಿಕೆ, ಕೆಲವು ನಿರಾಶೆಯ ಉದ್ಗಾರಗಳು, ಕೆಲವು ದೇಶ ಮಾತೆಯ ಸ್ತೋತ್ರಗಳು, ಮತ್ತೆ ಕೆಲವು ಮಹತ್ವದ ಸ್ಥಳಗಳನ್ನು ಕಂಡಾಗ ಸ್ಫೂರ್ತಿಬಂದಾಗ ಮನದ ಚಾಪಲ್ಯಕ್ಕಾಗಿ ಹಾಡಿದುವು.

ಈ ಗ್ರಂಥದಲ್ಲಿನ ಕವನಗಳು ಕೆಲವು ತಾನಾಗಿ ಹೊರಬಂದುವು, ಕೆಲವು ಬೇಕೆಂತಲೇ ಬರೆದುವು, ಕೆಲವು ನಿರ್ವಾಹವಿಲ್ಲದೆ ಬರೆದುವು, ಕೆಲವು ಚೆನ್ನಾಗಿ ಆಲೋಚಿಸಿ ಬರೆದುವು. ಕವಿತೆಗಳ ಛಂದಸ್ಸಿನಲ್ಲಿಯೂ ಹೀಗೆಯೇ ಯಾವ ಒಂದು ಓರಣವೂ ಇಲ್ಲ. ಕೆಲವು ಹಳಗನ್ನಡ ಶೈಲಿಯ ಕಂದ ವೃತ್ತಗಳು, ಕೆಲವು ಹೊಸಗನ್ನಡದ ಹಾಡುಗಳು, ಮತ್ತೆ ಕೆಲವು ಶರಣರ ವಚನಗಳ ಮಾದರಿಯವು, ಕೆಲವು ದಾಸರ ಪದಗಳ ಮಾದರಿಯವು. ಪಲವು ಕವಿತೆಗಳಲ್ಲಿ ಛಂದಸ್ಸಿನ ನಿರ್ಬಂಧವಿದೆ. ಮತ್ತೆ ಕೆಲವುಗಳಲ್ಲಿ ಸ್ವಚ್ಛಂದತೆಯಿದೆ. ಇನ್ನು ಕೆಲವುಗಳಲ್ಲಿ ಮಿಶ್ರಣವಿದೆ. ಕೆಲವಂತೂ ಕೇವಲ ಗದ್ಯಗಳೇ ಆಗಿವೆ. ಆದುದರಿಂದ ಈ

ಕವನ ಸಂಗ್ರಹದಲ್ಲಿ ಯಾವುದೊಂದು ಹಿರಿಯಗುಣವೂ ಓರಣವೂ ಇಲ್ಲವಾದರೂ ಇದು ರಸಿಕರು ಒಮ್ಮೆ ರುಚಿನೋಡಲು ಅರ್ಹವಾಗಿದೆಯೆಂದು ಕೆಲವು ಗೆಳೆಯರ ಅಂಬೋಣ. ಇದು ಎಷ್ಟರಮಟ್ಟಿಗೆ ನಿಜವೆಂಬುದು 'ಆಪರಿತೋಷಾದ್ವಿದುಷಾಂ ನ ಸಾಧುಮನ್ಯೇ ಪ್ರಯೋಗ ವಿಜ್ಞಾನಂ' ಎಂಬ ಕವಿಗುರುವಿನ ವಾಕ್ಯದಂತೆ ಗ್ರಂಥಕ್ಕೆ ದೊರೆಯುವ ಪ್ರೋತ್ಸಾಹದಿಂದ ನಿಶ್ಚಯಿಸಬೇಕಾದ ಸಂಗತಿ.

ನನಗೆ ಕವಿತೆಗಳನ್ನು ಕಟ್ಟಿ ಹಾಡುವ ಚಾಪಲ್ಯ ಬಾಲ್ಯದಿಂದಲೂ ಉಂಟು. ಆದರೆ, ಈ ಹುಚ್ಚು ನನಗೆ ಸದಾ ಹಿಡಿದಿರುವುದಿಲ್ಲ. ಎಂದಾದರೊಮ್ಮೆ ಇದು ಕಾಣಿಸಿಕೊಳ್ಳುವುದು. ಅದು ನಿಮಿತ್ತವೇ ನಾನು ಅನೇಕ ವರ್ಷಗಳ ಅವಧಿಯಲ್ಲಿ ಕೇವಲ ಕೆಲವು ಕವಿತೆಗಳನ್ನು ಮಾತ್ರ ಬರೆದಿರುವುದು. ಅಲ್ಲದೆ ಅವನ್ನು ಬರೆದ ಎಷ್ಟೋ ವರ್ಷಗಳ ಮೇಲೆ-ಮುದ್ರಣ ಮಾಡಿಸಲು ಸೌಕರ್ಯವಿದ್ದರೂ-ಕೇವಲ ಗೆಳೆಯರ ಬಲವಂತದಿಂದ ಈಗ ಪ್ರಕಟಿಸುತ್ತಿರುವುದು.

ನನ್ನ ಕವಿತೆಗಳನ್ನು ಹಲವು ವಿದ್ವತ್ ಸಭೆಯಲ್ಲಿಯೂ, ರಾಜಸಭೆಗಳಲ್ಲಿಯೂ, ಮಹಾಜನರ ಸಮ್ಮುಖದಲ್ಲಿಯೂ ಓದಿದ್ದೇನೆ. ಹಾಡಿದ್ದೇನೆ. ಅವನ್ನು ಕೇಳಿದ ಸಹೃದಯರನೇಕರು ಮೆಚ್ಚಿ ಆನಂದಿಸಿದ್ದಾರೆ. ಮನತುಂಬಿ ಒಪ್ಪಿಗೆಯ ಮಾತುಗಳನ್ನಾಡಿದ್ದಾರೆ; ಪ್ರೋತ್ಸಾಹಿಸಿದ್ದಾರೆ.

ನಾನು ಬರೆದಿರುವ ಈ ಕವಿತೆಗಳಲ್ಲಿ ಕೆಲವು ಈಗಾಗಲೇ ಮೊದಲು ಬರೆದು ಪ್ರಕಟಿಸಿರುವ ಶ್ರೀ ಕೃಷ್ಣರಾಜ ವಿಳಾಸಂ, ಗಾಂಧಿ ಗೀತಾವಳಿ ಎಂಬ ಗ್ರಂಥಗಳಲ್ಲಿಯೂ, ಶರಣ ಸಾಹಿತ್ಯ, ಶಿವಾನುಭವ ಪತ್ರಿಕೆಗಳಲ್ಲಿಯೂ, ಮೈಸೂರು ಸರಕಾರದ ಪಠ್ಯ ಪುಸ್ತಕಗಳಲ್ಲಿಯೂ ಪ್ರಕಟವಾಗಿ ಮಹಾಜನರಿಗೆ ಹಾಗೂ ವಿದ್ಯಾರ್ಥಿಗಳಿಗೆ ಪರಿಚಿತವಾಗಿವೆ. ಮತ್ತೆ ಕೆಲವು ಈ ಗ್ರಂಥದಲ್ಲಿ ಮಾತ್ರ ನೂತನವಾಗಿ ಪ್ರಕಟಗೊಂಡಿವೆ. ಅಂತು ಈ ಸಂಗ್ರಹವು ನನ್ನ ಹಳೆಯ ಮತ್ತು ಹೊಸ ಕವಿತೆಗಳನ್ನು ಒಟ್ಟುಗೂಡಿಸಿದ ಒಂದು 'ಕವನ ಮಾಲಿಕೆ' ಎನ್ನಬಹುದು.

ಕವಿತೆಗಳು ಆನಂದಮೂಲನಾದ ಆತ್ಮನ ಪ್ರೇರಣೆಯಿಂದ ಹುಟ್ಟತಕ್ಕವು. ಆದಕಾರಣ ಅವು ತಮ್ಮನ್ನು ಹಡೆದವರಿಗೂ ಲಾಲಿಸಿದವರಿಗೂ ಸಂತೋಷವನ್ನು ಉಂಟುಮಾಡುವುದು ಸಹಜವೇ ಆಗಿದೆ. ಆದುದರಿಂದಲೇ ಕಾವ್ಯಾನಂದವನ್ನು ನಮ್ಮ ಹಿರಿಯರು ಬ್ರಹ್ಮಾನಂದಕ್ಕೆ ಸಮವೆಂದೂ ಕಾಂತಾನಂದಕ್ಕೆ ಹಿರಿದೆಂದೂ ಹೇಳಿರುವರು. ಈ ಕಾರಣದಿಂದ ಈ ಕವಿತೆಗಳು ಓದಿದವರಿಗೆ

ಯತ್ಕಿಂಚಿತ್ ಸಂತೋಷವನ್ನು ಉಂಟುಮಾಡಿದರೂ ಅದನ್ನು ಲೇಖಕನು ಹೆಚ್ಚಿನ ಮನ್ನಣೆಯೆಂದು ಭಾವಿಸುವನು. ಏತಕ್ಕೆಂದರೆ: 'ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರ ಪೂಜನಂ' ಎಂಬ ಪ್ರಾಚೀನೋಕ್ತಿಯುಂಟಷ್ಟೆ

ಈ ಕವಿತೆಗಳಲ್ಲಿ ಅಜಂತವನವಿ, ಕೈಲಾಸಗವಿ ಎಂಬಿವುಗಳು ಆಯಾ ಸ್ಥಳದಲ್ಲಿಯೇ ಹಾಡಿದುವು. ರಾಮರಾಜನ ಸಂದೇಶವು 'ರಾಕ್ಷಸ ತಂಗಡಗಿ' ರಣಭೂಮಿಯಲ್ಲಿ ಹೊರಸೂಸಿದುದು. ವಿದ್ಯಾರಣ್ಯಮುನಿ, ಕಡಲೆ ಗಣಪತಿ ಇವು ಪಂಪೆಯಲ್ಲಿ ಬರೆದುವು. ನೆಲಸಂಪಿಗೆ, ಗಣಪೆಬಳ್ಳಿ ಇವು ಮಲೆನಾಡು ಸಂಚಾರದಲ್ಲಿ ಹೊಳೆದುವು. ಮತ್ತುಳಿದುವು ಮಹಾಪುರುಷರ ಸಂದರ್ಶನದಲ್ಲಿಯ ವಿಯೋಗ ಕಾಲದಲ್ಲಿಯೂ ಬರೆದುವು. ಪುಲಿಕೇಶಿಯು ಬಾದಾಮಿಯಲ್ಲಿ ಬರೆದುದು. ಇನ್ನುಳಿದುವು ಬೇರೆಬೇರೆ ಸಂದರ್ಭ ಸನ್ನಿವೇಶದಲ್ಲಿ ಬರೆದುವು.

ದುಂಬಿಯು, ವಿಶಾಲವಾದ ಈ ಪೃಥ್ವಿಯಲ್ಲಿ ಒಂದು ಕ್ಷುದ್ರ ಪ್ರಾಣಿ ಆದರೂ ಅದು ಪ್ರತಿಭಾನ್ವಿತ ಕವಿಜನರ ಮನ್ನಣೆಗೆ ಪಾತ್ರವಾಗಿ ಮಾನ್ಯತೆಯನ್ನು ಪಡೆದಿದೆ. ಈ ಪ್ರಾಣಿ ಆಕಾರದಿಂದ ಚಿಕ್ಕದಾದರೂ ಅದರ ತ್ರಾಣ ಹಿರಿದೆನಿಸಿದೆ. ಅದು ವಿಶಾಲ ಪ್ರಪಂಚದಲ್ಲೆಲ್ಲಾ ಸಂಚರಿಸಿ ವಿವಿಧ ನಂದನಗಳಲ್ಲಿ ಅಲೆದಾಡಿ ಬಗೆಬಗೆಯ ಪುಷ್ಪಗಳಿಂದ ಮಧುವನ್ನು ಸಂಗ್ರಹಿಸಿ ರುಚಿಕಟ್ಟಾದ ಜೇನುಕೊಡವನ್ನು ಕಟ್ಟಿ ಜನತೆಗೆ ಸಂಜೀವನವನ್ನು ದೊರಕಿಸುತ್ತದೆ. ಕವಿ-ದುಂಬಿಗಳಿಬ್ಬರೂ ಸಮಾನ ಧರ್ಮಿಗಳು. ಇವರಿಬ್ಬರೂ ದೇಶಾಟನಪ್ರಿಯರು, ಸುಮನೋನುರಾಗಿಗಳು, ವಸಂತಮಾಸ ಪ್ರಿಯರು, ಸ್ವಚ್ಛಂದ ವೃತ್ತಿಯವರು. ಆದಕಾರಣನೇ ತುಂಬಿಗೆ ಕವಿಸಾಮ್ರಾಜ್ಯದಲ್ಲಿ ಹೆಚ್ಚಿನ ಮನ್ನಣೆಯುಂಟು. ಪ್ರಕೃತಗ್ರಂಥಕರ್ತೃವು ತನ್ನನ್ನು ಒಂದು 'ದುಂಬಿ' ಎಂದು ಭಾವಿಸಿ ತನ್ನ ಕೃತಿಗಳು ಜೇನುಕೊಡದಂತೆ ಜನೋಪಕಾರಿಗಳಾಗಲೆಂಬ ಹಂಬಲದಿಂದ ಕೂಡಿ ತನ್ನ ಈ ಕವನಸಂಗ್ರಹಕ್ಕೆ 'ದುಂಬಿ' ಎಂಬ ಹೆಸರನ್ನು ಕರೆದಿದ್ದಾರೆ. ಸಹೃದಯರಾದ ವಾಚಕರು ಅಡವಿಯ ಪ್ರಾಣಿಯೆಂದು ಧಿಕ್ಕರಿಸದೆ ತುಂಬಿಯ 'ಇಂಚರ'ಕ್ಕೆ ಕಿವಿಗೊಟ್ಟು ಆನಂದಿಸಲಿ. ಮತ್ತು ಬಹುದಿನಗಳ ಶ್ರಮದಿಂದ ಕಟ್ಟಿದ 'ಜೇನುಕೊಡ'ದ ಪ್ರಯೋಜನವನ್ನು ಪಡೆಯಲಿ. ಒಂದುವೇಳೆ ಇದರಿಂದ ಯಾರಿಗೂ ಲಾಭವಿಲ್ಲವೆಂದು ಭಾವಿಸಿದರೂ ತೊಂದರೆಯಂತೂ ಇಲ್ಲವಷ್ಟೆ.

ದಿನಾಂಕ ೧೪-೧೨-೧೯೫೧

'ಶೂಲಪಾಣಿ'

# ಸಮರ್ಪಣ

ಜೀವನದ ಮೊದಲದಿನಗಳಲ್ಲಿ ನಾನು ಅಜ್ಞಾನದ ಕಗ್ಗತ್ತಲೆಯ ಕೋಣೆಯಲ್ಲಿ ಕಂಗಾಣದಿದ್ದಾಗ, ನನ್ನನ್ನು ಕರುಣೆಯಿಂದ ಕೈಹಿಡಿದು ಮೈದವಿ ಬೆಳಕಿನ ನಡುಮನೆಗೆ ಯಾರು ತಂದು ಬಿಟ್ಟರೋ, ಮೈಸೂರು ರಾಜಾಸ್ಥಾನದಲ್ಲಿ ಮಹಾವಿದ್ವಾನ್ ಪದವಿಯನ್ನೂ, 'ಕರ್ಣಾಟಕ ಭಾಷಾರತ್ನಂ' ಎಂಬ ಬಿರುದನ್ನೂ ಪಡೆದು, ಮಹಾರಾಜರ ಕಾಲೇಜಿನಲ್ಲಿ ಪಂಡಿತೋತ್ತಮರಾಗಿದ್ದು ಸಾವಿರಾರು ಮಂದಿ ಶಿಷ್ಯ ಸಂಪತ್ತನ್ನುಗಳಿಸಿ, ಕನ್ನಡ ಸಂಸ್ಕೃತ ಗ್ರಂಥಗಳ ಪರಿಷ್ಕರಣ ಹಾಗೂ ಪ್ರಕಟನೆಗಳ ಮೂಲಕ ಯಾರು ನಮ್ಮ ಕನ್ನಡ ನಾಡು ನುಡಿಗಳಿಗೆ ಮಿಗಿಲಾದ ಸೇವೆಯನ್ನು ಸಲ್ಲಿಸಿದರೋ, ಆ ನನ್ನಪೂಜ್ಯ ಗುರುವರ್ಯ **ಕೈ॥ ಪಿ. ಆರ್. ಕರಿಬಸವಶಾಸ್ತ್ರಿಗಳ** ಪವಿತ್ರಾತ್ಮನಿಗೆ ಕಾಣಿಕೆಯಾಗಿ

'ಗ್ರಂಥಕರ್ತೃ'

'ದುಂಬಿ'



ಆಸ್ಥಾನ ಮಹಾವಿದ್ವಾನ್, ಕರ್ಣಾಟಕ ಭಾಷಾರತ್ನಂ,

ಕೈ|| ಪಿ. ಆರ್. ಕರಿಬಸವ ಶಾಸ್ತ್ರಿಗಳು

(ಮೈಸೂರು.)

# ವಿಷಯ ಸೂಚಿಕೆ

# ಭರತ ಮಾತೆ

ಭರತ ಮಾತೆಯೆ ಭರತ ಮಾತೆಯೆ ನಿನ್ನ ಮಹಿಮೆಯ ಕೇಳಿಹೆ
ಪರಮ ಸುಕೃತಿಯು ಮಾನ್ಯೆ ನೀನೆಂಬೊಸಗೆ ಯೆಲ್ಲವನರಿತಿಹೆ

ಎಲ್ಲಿ ರಾಮನ ಸತ್ಯ ನಿಷ್ಠೆಯು ಎಲ್ಲಿ ಭೀಮನ ಶೌರ್ಯವು
ಎಲ್ಲಿ ಲಕ್ಷ್ಮಣ ಪಾರ್ಥ ಮುಖ್ಯರ ವೀರಧೀರರ ಧೈರ್ಯವು ೧

ಜನಕ ಕೃಷ್ಣರ ತತ್ವವಿದ್ಯೆಯು ವ್ಯಾಸಮುನಿಯಾ ಹಿರಿಮೆಯು
ಮುನಿ ವಶಿಷ್ಠನ ಬ್ರಹ್ಮನಿಷ್ಠೆಯು ಎಲ್ಲಿ ಬುದ್ಧನ ಕರುಣೆಯು ೨

ವರ ಅಶೋಕನ ಪೃಥ್ವಿರಾಜನ ಇಮ್ಮಡಿಯ ಪುಲಿಕೇಶಿಯ
ಪರಮ ವಿಕ್ರಮ ಘನ ಶಿವಾಜಿಯ ಕೆಚ್ಚು ಎಲ್ಲಡಗಿರ್ಪುದು? ೩

ಕಾಳಿದಾಸನ ಭಾಸ ಬಾಣರ ರಸಿಕತನವೆಲ್ಲಿರ್ಪುದು ?
ಶೂಲಿಯಣುಗ ಹರೀಶ ರಾಘವ ರತುಲಕಲೆಯೆಲ್ಲಿರುವುದು ? ೪

ಧರೆಯ ಧರ್ಮದ ಗುರುಗಳೆನಿಸಿದ ವಿಬುಧ ಶಾಂಕರ ಮಾಧ್ವರು
ಗರುವ ರೇಣುಕ ರಾಮನನುಜರು ಬಸವ ಮೊದಲಹರೆಲ್ಲರು ? ೫

ನಿನ್ನ ಪುಣ್ಯೋದರದಿ ಜನ್ಮಿಸಿ ಜಗವ ಪೊರೆದಿವರೆಲ್ಲರು
ಇನ್ನು ಭಾರತ ವರ್ಷಕೊಮ್ಮೆಯು ಬಾರದಿಹರೇ ಜನನಿಯೆ? ೬

ಶಿಲ್ಪಕುಶಲರು, ಯೋಗನಿಷ್ಠರು, ಪುಣ್ಯವನಿತೆಯರೆಲ್ಲರು
ಸತ್ಯನಿಷ್ಠರು, ದಾನಶೂರರು, ಸ್ವಾಮಿಭಕ್ತರು ಎನಿಪರು ೭

ತಾಯೆ ಮುನಿಜನಗೇಯೆ ನಿನ್ನೆದೆಹಾಲಿನಿಂದಲೆ ಬಳೆದರು
ಕಾಯೆ ಪಾವನಕಾಯೆ ಕರುಣೆಯೊಳೆಲ್ಲ ಭಾರತ ಮಕ್ಕಳ ೮

ಅಂದಿನವರಾಸದ್ಗುಣಂಗಳ ದಿವ್ಯಕಾಂತಿಯು ನೀಯುತ
ಇಂದಿನವರಾದೆಮ್ಮನೆಲ್ಲರ ಕರುಣಿಸೌ ಋಷಿವಂದ್ಯೆಯೆ ೯

ನಿನ್ನ ಶಿರವೇ ಗುರುಹಿಮಾಲಯ ಕನ್ಯೆಕುವರಿಯೆ ಪಾದವು ।
ನಿನ್ನ ಕಾಂಚೀಧಾಮ ವಿಂಧ್ಯೆಯು ವಾರಣಾಸಿಯೆ ಹೃದಯವು ೧೦

ಶಿವನ ಲೀಲಾಭೂಮಿ ಭಾರತವರ್ಷವೆಂಬರು ಮುನಿಗಳು
ಭುವಿಯೊಳಿದುವೇ ಸ್ವರ್ಗವೆಂಬರು ಕವಿಗಳರಿವಿನ ರವಿಗಳು ೧೧

ವಿಜಯಿಸೌ ವರ ಭರತಮಾತೆಯೆ ಗಾಂಧಿ ನೆಹರುಗಳಾಯಿಯೆ
ಸುಜನ ಕವಿಬುಧವೃಂದ ವಂದ್ಯೆಯೆ ಗಂಗೆಕೃಷ್ಣೆಗಳಾಲಯೆ ೧೨

ಭೂಮಿಯೊಳು ಧರ್ಮಿಷ್ಠರೆನ್ನಿಸಿ ಬಾಳಲೆಮ್ಮಯ ಬಂಧುಗಳ್
ಸೋಮಶೇಖರ ನೊಲುಮೆಯಿಂದಲಿ ಮೆರೆಯಲೆಮ್ಮಯ ಭಾರತರ್ ೧೩

ಗಾಂಧಿ ಠಾಗೂರ್ ವಲ್ಲಭಾಯಿಗಳೊರೆದ ರೀತಿಯೊಳೆಮ್ಮವರ್
ಇಂದು ವರ್ತಿಸಿ ವಿಜಯಶಾಲಿಗಳೆನಿಸಿ ಮೆರೆಯಲಿ ಭೂಮಿಯೊಳ್ ೧೪

ಆಯುರಾರೋಗ್ಯವನು ತಾಳುತ ಬಾಳುವಂದದಿ ಹರಸುನೀಂ
ತಾಯೆ ಭಾರತಮಾತೆ ನಿನ್ನಯ ಜಾತರಂ ನಿರ್ಭೀತರಂ ೧೫

# ಕರ್ಣಾಟಕ ಮಾತೆ

**ರಾಗ-ಕಾಂಬೋಧಿ, ತಾಳ-ಝಂಪೆ**

ಭೋಮಾತೆ ಕರ್ಣಾಟ ಭೂಮಾತೆ ವಿನುತೆ ||ಪ||
ನೇಮದಿಂ ವಂದಿಪೆನು ಭುವನವಿಖ್ಯಾತೆ; ||ಅ||

ಇಮ್ಮಡಿಯ ಪುಲಿಕೇಶಿ ನಮ್ಮ ವಿಕ್ರಮರಾಯ
ಒಮ್ಮತದಿ ರಾಜ್ಯವಾಳಿದ ಕೃಷ್ಣರಾಯ
ಬೊಮ್ಮವಿದ ನೃಪತುಂಗ ಬಿಟ್ಟಿದೇವಾದಿಗಳು
ಅಮ್ಮ ನಿನ್ನುದರದೊಳೆ ಜನಿಸಿರ್ಪರಲ್ತೆ? ೧

ರನ್ನ ಲಕ್ಷ್ಮೀಶ ಹರಿಹರ ಷಡಕ್ಷರದೇವ
ಪೊನ್ನನಯಸೇನ ಪಂಡಿತ ರಾಘವ
ಜನ್ನ ಸರ್ವಜ್ಞಮುನಿ ಪಂಪಾದಿ ಕವಿವರರು
ಎನ್ನಮ್ಮ ನಿನ್ನೆದೆಯ ಹಾಲುಂಡರಲ್ತೆ? ೨

ಶ್ರೀ ನೀಲಕಂಠಾರ್ಯ ಶ್ರೀ ರೇಣುಕಾಚಾರ್ಯ
ಆ ಮಾಧವಾಚಾರ್ಯ ಸಾಯಣಾಚಾರ್ಯ
ಆನಂದತೀರ್ಥಮುನಿ ಬಸವಾಲ್ಲಮಾದಿಗಳು
ಹೇ ಮಾತೆ ನಿನ್ನುದರ ಸಂಜಾತರಲ್ತೆ? ೩

ಇಂತಪ್ಪ ನಿನಗೇಕೆ ಚಿಂತೆಯದು ಮಿಗಿಲಾಯ್ತು
ಶಾಂತಿಯಿನಿತಿಲ್ಲಾಯ್ತು ದಾರಿದ್ರ್ಯಮಾಯ್ತು
ಭ್ರಾಂತಿಯೋ ಶಾಪಮೋ ಆಲಸ್ಯಮೋ ಅರಿಯೆ
ಕ್ರಾಂತಿಯಿಲ್ಲದ ಬಾಳು ನಮ್ಮವರ ಗೋಳು ೪

ತಾಯೆ ಮತ್ತೊಂದು ತಾಳುವೆ ಪೂರ್ವವೈಭವವ ?
ತಾಯೆ ಮತ್ತೊಂದುಗೂಡುವರೆ ನಿನ್ನವರು ?
ಬಾಯಿಮಾತಿಂ ಸಾಧ್ಯಮಪ್ಪುದೇ ಹಿರಿಯತನ
ಕಾಯಮುಂ ಸವೆಸದಲೆ ಕನ್ನಡಿಗರನಿಶಂ ? ೫

# ಕನ್ನಡ ನಾಡು

ವೃ॥ ರಸವತ್ಕಾವ್ಯ ಕಲಾವಿದರ್ ನಿರುಪಮರ್ ಲೋಕೋಪಕಾರಾಸ್ಪದರ್
ರಸಿಕರ್ ಮಾನ್ಯರುದಾರಕಾರ್ಯ ಸಫಲರ್ ವಿಖ್ಯಾತ ಪುಣ್ಯಾಸ್ಪದರ್
ಅಸಮಾಕ್ಷಂ ಗೆಡೆಯುಪ್ಪುವರ್ ವಿಲಸಿತರ್ ಪುಟ್ಟಿರ್ಪನಾಡೆಂಬುವಾ
ಪೆಸರಿ ಕನ್ನಡನಾಡಿಗಲ್ಲದಿಳೆಯೊಳ್ ಮತ್ತೆಲ್ಲಿಗನ್ವರ್ಥವೈ ೧

ವೃ॥ ನಾನಾಕ್ಷೇತ್ರ ಸಮೂಹದಿಂದೆ ಮೆರೆವಾತೀರ್ಥಂಗಳಿಂ ಸತತಂ
ನಾನಾಜಾತಿ ಕುಜಂಗಳಿಂ ಮಣಿಗಳಿಂ ಕೂಡಿರ್ಪ ಭೂಭಾಗದಿಂ
ನಾನಾವಿದ್ಯೆಗಳಿಂ ವಿಭೂಷರೆನಿಸಿರ್ಪಾ ಸಜ್ಜನವ್ರಾತದಿಂ ।
ದೇನೆಂಬೆಂ ವರದೇಶಮಿರ್ಪುದಿಳೆಯೊಳ್ ಕರ್ಣಾಟಕಾಖ್ಯಂ ವಲಂ ೨

ವೃ॥ ಪೂಗಳ ಕಂಪು ಮಾರುತನ ತಂಪು ಗಿಡಂಗಳ ಗುಂಪು ಕೋಕಿಲಾ
ರಾಗದಲಂಪು ನೀರೆಯರ ಪೆಂಪು ವನಂಗಳ ಸೊಂಪಿನಿಂದ ಮಾ
ಭೋಗದಗೊತ್ತು ಯೋಗಿಗಳಬಿತ್ತು ವಿಲಾಸಿನಿ ಭಾರತಾಂಬೆಯಾ
ಮೂಗುತಿ ನತ್ತು ನೋಡಿದೊಡೆ ಕನ್ನಡನಾಡಿದು ವೈಭವಾನ್ವಿತಂ ೩

ವೃ॥ ಶ್ರೀರಾಜದ್ದುಗಣೆ ತುಂಗಭದ್ರೆ ಕಪಿಲಾ ಗೋದಾವರೀ ದೇವಿಯರ್
ಶ್ರೀರಂಗಾಖ್ಯಸುಪಾದ ಭಕ್ತಿವಿಮಲಾ ಕಾವೇರಿ ಸನ್ಮಾತೆಯುಂ
ಕಾರುಣ್ಯಾಸ್ಪದಳಾಗಿ ಭಕ್ತಕುಲಮಂ ರಕ್ಷಿಪ್ಪಶ್ರೀಕೃಷ್ಣೆಯುಂ
ಸಾರುತ್ತೀ ಕರುನಾಡು ದೇಶಮನಿದಂ ನೀರಿತ್ತು ಸಂರಕ್ಷಿಪರ್ ೪

ಕಂ॥ ಶಿವಗಂಗೆ ಹಂಪೆ ಹರಿಹರ
ಮವಿರಳಮಾಹಾತ್ಮ್ಯಯುಕ್ತ ಗೋಕರ್ಣಂ ಮೇಣ್
ಬುವಿಯೊಳ್ ಮೆರೆದಿರ್ಪುಡುಪಿಯು
ಮಿವುಗಳೆ ಕರುನಾಡು ಸ್ಥೈಪಿನೆಡೆಗಳ್ ತಿಳಿಯಲ್ ೫

# ವಿ ಜ ಯ ದ ಶ ಮಿ

(ಭೋ. ಷ)

ವಿಜಯ ದಶಮಿ ಬಂದುದೀಗ ।
ವಿಜಯ ದಶಮಿ ಬರ್ಪುದೀಗ ।
ಸುಜನರೆಲ್ಲ ನಾಡಹಬ್ಬವೆಂದು ಹರುಷದಿ ॥
ಭಜಿಸುತಿಹರು ಹಾಡುತಿಹರು ।
ವಿಜಯವಾಗಲೆಮ್ಮ ಜನಕೆ ।
ಭುಜಗಭೂಷ ಪರಮ ಶಿವನ ಕೃಪೆಯೊಳೆನ್ನುತ ೧

ಅಂದು ವಿಜಯ, ಕುರು ನೃಪತಿಯು ।
ಮಂದಮತಿಯು ತುರುಕುಲವನು ।
ಬಂಧಿಸಿರಲು, ಬಿಡಿಸಲವನು ದಶಮಿ ದಿನದೊಳು ॥
ಸಂದ ವಿಜಯ ಜಾತ್ರೆ ಪೊರಡ ।
ಲಂದಿನಿಂದ ವಿಜಯ ದಶಮಿ ।
ಯೆಂದು ಶುಭದ ಪೆಸರು ಜಗದೆ ರೂಢಿಯಾದುದು ೨

ಧೀರ ವಿಜಯನಗರದವರು ।
ಭೂರಿ ವಿಭವದಿಂದಲಿದನು ।
ಸಾರ ವಿಜಯದಶಮಿಯೆಂದು ನಡೆಸುತಿರ್ದರು ॥
ಧೀರತನವನೀಯಲೆಮ್ಮ ।
ವೀರ ಕನ್ನಡಿಗರಿಗೆನುತ ।
ಮಾರಹರನ ಹಂಪೆ ಯರಸನನ್ನು ಪಾಡುತ ೩

# ಓ! ಅಜಂತದ ಗವಿಯೆ

(ದ್ವಿ. ಪ.)

ಓ! ಅಜಂತದ ಗವಿಯೆ ಸೌಂದರ್ಯನಿಧಿಯೆ
ಶಿಲ್ಪ ಶಾಸ್ತ್ರದನೆಲೆಯೆ ಚಿತ್ರದರಮನೆಯೆ ೧

ಘನಸೃಷ್ಟಿ ಸೌಂದರ್ಯರಾಶಿಮಧ್ಯದಲಿ
ಮನವಿಟ್ಟು ಸೃಷ್ಟಿಸಿದರಾರು ಸುಕೃತರಲಿ ೨

ಶಿಲೆಯಲ್ಲ ಕಲೆಯುಬಲೆಯೆಂಬ ಕವಿಯೊಬ್ಬ
ಕಲೆಯಲ್ಲ ಸೊಗದನೆಲೆಯೆಂಬ ನಿನ್ನೊಬ್ಬ ೩

ಓ! ಅಜಂತದ ವಾಸ್ತು ಶಿಲ್ಪ ಚಿತ್ರಗಳೇ
ಅಜನಸೃಷ್ಟಿಯು ಪಳಿವ ಕಲೆಯ ಕೇಂದ್ರಗಳೇ ೪

ವಾಸ್ತುಶಿಲ್ಪವ ನೋಡಿ ತಣಿಯದಿಹರಾರು?
ಭಿತ್ತಿ ಚಿತ್ರವ ನೋಡಿ ಕುಣಿಯದಿಹರಾರು? ೫

ಎಲ್ಲಿ ನೋಡಿದೊಡಲ್ಲಿ ಬುದ್ಧ ಗುರುವಿಹನು
ಎಲ್ಲವೂ ಶೂನ್ಯವೆಂದುಪದೇಶಿಸುವನು ೬

ಬುದ್ಧ ಭಿಕ್ಷುಗಳಿದ್ದ ಗವಿಯೆಲ್ಲವಿಂದು
ಸಿದ್ಧಾಂತ ಮಾಡಿಹವು ಜಗವು ಸುಳ್ಳೆಂದು ೭

ಇಪ್ಪತ್ತು ಮೇಲೆ ಒಂಬತ್ತು ಗವಿಗಳೊಳು
ಬೆಪ್ಪುಗೊಳಿಸುವ ಮಾಯೆ ತುಂಬಿಕೊಂಡಿಹಳು ೮

ಓ! ಬುದ್ಧ ಗುರುದೇವ ಇಲ್ಲಿಯೇ ಇಹೆಯಾ?
ಇದ್ದರೇತಕೆ ನಮ್ಮ ಮೇಲೆ ನಿರ್ದಯೆಯಾ? ೯

ಇಮ್ಮಡಿಯ ಪುಲಿಕೇಶಿ ಕುಳಿತಿರುವನಲ್ಲಿ
ಕನ್ನಡಮ್ಮನ ಹಿರಿಯ ಮಗನಿಹನು ಅಲ್ಲಿ ೧೦

ದಾನಶೂರನು ಶಿಬಿಯು ಕಂಗೊಳಿಪನಲ್ಲಿ
ಮಾನವರಿಗೌದಾರ್ಯ ಬೋಧೆಯಹುದಿಲ್ಲಿ ೧೧

ಗಂಧರ್ವ ಸುಂದರಿಯರಲ್ಲಿ ತುಂಬಿಹರು
ಮಂದಹಾಸದಿ ಜಗವ ನೋಡಿ ಕಾಡುವರು ೧೨

ರಾಜದ್ವಾರದ ಭಿಕ್ಷುವನು ಕಂಡೆನಲ್ಲಿ
ರಾಜರ್ಷಿ ಬುದ್ಧನೆಂದರಿತೆ ಮನದಲ್ಲಿ ೧೩

ರಾಜನೊಡ್ಡೋಲಗದ ದೃಶ್ಯವೊಂದಿಹುದು
ಸಾಜದಿಂ ಜಗಕೆ ವೈರಾಗ್ಯ ಬೋಧಿಪುದು ೧೪

ಬೋಧಿಸತ್ವನು 'ಪದ್ಮಪಾಣಿ' ಎನಿಸಿಹನು
ಸಾಧಿಸಿರಿ ಧರ್ಮವನು ಎನುತ ಪೇಳುವನು ೧೫

ಬದ್ಧನಿರ್ವ್ಯಾಣವನು ಕಂಡೆ ನಾನಲ್ಲಿ
ಶುದ್ಧ ಶಿಲ್ಪದ ಸುಖವನುಂಡೆ ಮನದಲ್ಲಿ ೧೬

ಜಾತಕದ ಕಥೆಗಳನು ಚಿತ್ರ ಪೇಳುವುವು
ಮಾತಿಲ್ಲದೆಲ್ಲವನು ಶಿಲ್ಪ ಬೋಧಿಪುವು ೧೭

ಅಲ್ಲಿ ಶಿಲ್ಪಾನಂದ ಚಿತ್ರದಾನಂದ
ಅಲ್ಲಿ ಆತ್ಮಾನಂದ ಸೃಷ್ಟಿ ಬಲುಚೆಂದ ೧೮

ಎಲ್ಲ ಗವಿಗಳ ಮುಂದೆ ನದಿಯೊಂದು ಇಹುದು
ಸಲ್ಲಲಿತ ಬೌದ್ಧಧರ್ಮದ ಹೊಳೆಯದಹುದು ೧೯

ಎಲ್ಲ ಗವಿಗಳ ಮುಂದೆ ಹೊಳೆ ಹರಿಯುತಿಹುದು
ಬಲ್ಲವರಿಗದುವೆ ಕಾವ್ಯಾನಂದವಹುದು ೨೦

ದೇಶದೇಶದ ಜನರು ದಿನವು ಬರುತಿಹರು
ಭಾಸುರದ ಕಲೆಗಾಗಿ ತಲೆದೂಗುತಿಹರು ೨೧

ಶಿಲ್ಪಿಗಳೆ ಧನ್ಯರಾಗವಿಯ ಕೊರೆದವರು
ಚಿತ್ರವನು ಬರೆದವರು ಕವಿಬ್ರಹ್ಮರವರು ೨೨

ನೋಡಿದಾಕರ್ಣಗಳವೆ ಸುಕೃತಿಯವುಗಳನು
ಹಾಡಿದಾರಸನೆಯದೆ ಸುಕೃತಿ ಜೀವರೊಳು ೨೩

ಗಿರಿಗಳೆರಡರಮಧ್ಯೆ ಜಲಪಾತವೊಂದು
ಧರೆಯೊಳಗಜಂತೆಯನು ಸಾರುತಿಹುದಿಂದು ೨೪

ಓ! ಅಜಂತದಗವಿಯೆ ಸೌಂದರ್ಯನಿಧಿಯೆ
ಬೌದ್ಧಧರ್ಮದ ಮನೆಯೆ ಶಾಂತಿಯರಮನೆಯೆ ೨೫

# ಕೈಲಾಸ ಮಂದಿರ

(ದ್ವಿ. ಪ.)

ಅಹಹ ! ಏನದ್ಭುತವು ಏನು ಸೋಜಿಗವು !
ಮಹಿಯೊಳೀ ಕೈಲಾಸ ಗುಡಿಯು ಕೊರೆದಿರವು ೧

ಎಲ್ಲೂರ ಬೆಟ್ಟದೊಳು ಗುಡಿಯು ತಾನಿಹುದು
ಎಲ್ಲರಿಗು ತನ್ನ ಭವ್ಯತೆಯ ಬೋಧಿಪುದು ೨

ಆ ರಾಷ್ಟ್ರಕೂಟನೃಪ ಘನ ಕೃಷ್ಣದೇವ
ಧಾರಿಣಿಯೊಳಿದ ಗೆಯ್ದ ಸುಮಹಾನುಭಾವ ೩

ಆಹ ! ಏಂ ಸುಕೃತಿಯೋ ಆ ಕನ್ನಡರಸ
ಸಾಹಸಿಯು ಅವನಲ್ತೆ ಸತ್ಯಗುಣ ಸರಸ ೪

ಒಂದು ಬೆಟ್ಟವಕೊರೆದು ಗುಹೆಯ ನಿರವೆಸಗಿ
ತಂದಿಟ್ಟ ಕೈಲಾಸಗಿರಿಯ ಧರೆಗೊಸಗಿ ೫

ಕಂಡೆ ಕೈಲಾಸದೊಳು ಶಿವನ ಲೀಲೆಗಳ
ಖಂಡೇಂದುಧರಭಕ್ತ ದಿವ್ಯಮೂರ್ತಿಗಳ ೬

ಆ ಗಂಗೆ ಯಮುನೆಯರು ಸರಸ್ವತಿಯರು
ಮಂಗಳಲಾಂಗಿಯರಿಹರು ನದಿವನಿತೆಯುವರು ೭

ಹತ್ತು ಅವತಾರಗಳ ವಿಷ್ಣುವಿಹನಲ್ಲಿ
ಸುತ್ತಲುಂ ಸುರಗಣವು ಶೋಭಿಸುವುದಲ್ಲಿ ೮

ಬ್ರಹ್ಮನೊಡ್ಡೋಲಗವು ರಾಜಿಸುವುದಲ್ಲಿ
ಬ್ರಹ್ಮನಿಷ್ಠರು ನಮಗೆ ಕಾಣುತಿಹರಲ್ಲಿ ೯

ಕಂಡೆ ಕೈಲಾಸವನು ಧರಣಿಯೊಳೆ ನಾನು
ಪುಂಡರೀಕಾಕ್ಷ ಸಖ ರಾಜಧಾನಿಯನು ೧೦

ರಾಮಾಯಣದ ಕತೆಯನಲ್ಲಿ ನೋಡಿದೆನು
ರಾವಣನ ಭಕ್ತಿಯನು ಕಂಡು ನಲಿದಿಹೆನು ೧೧

ಭಾರತದ ಕತೆಯನ್ನು ಶಿಲ್ಪಿ ಪೇಳುವನು
ಧಾರಿಣಿಯೊಳಿದನೆಲ್ಲ ಕಣ್ಗೆ ತೋರುವನು ೧೨

ಮುಂದೆ ವೃಷಭೇಶ್ವರನು ರಾಜಿಸುತ್ತಿಹನು
ನಂದಿ ಭೃಂಗೀಶಾದಿ ಗಣರ ಕರೆಯುವನು ೧೩

ಹಿರಿಯ ಲಿಂಗವು ದಿವ್ಯಭವ್ಯಮೂರುತಿಯು
ಧರೆಯ ಧರ್ಮವೆ ರೂಪುಗೊಂಡ ಕೀರುತಿಯು ೧೪

ಗುಡಿಯ ನಿರ್ಮಿಸಿದವರು ಮಾನವರೆ ಅಲ್ಲ
ಪೊಡವಿಯೊಳಗಿದ ನೋಡದವ ಸುಕೃತಿಯಲ್ಲ ೧೫

ಒಂದು ಪಕ್ಕದಿ ಬುದ್ಧ ಗವಿಗಳಿರುತಿಹವು
ಒಂದು ಪಕ್ಕದಿ ಜಿನರ ಮಂದಿರಗಳಿಹವು ೧೬

ನಂದೀಶ ಪೂಜಿತನು ರಾಜಿಸುತ್ತಿಹನು
ಮುಂದೆ ಘೃಷ್ಣೇಶ್ವರವ ನೀಕ್ಷಿಸುತ್ತಿಹನು ೧೭

ಮೂವತ್ತು ಮೇಲ್ನಾಲ್ಕು ಗವಿಗಳವು ಚಂದ
ಭೂವನಿತೆಗಿವೆ ನೋಡೆ ಆಭರಣ ವೃಂದ ೧೮

ಏನೆಂದು ಬಣ್ಣಿಸಲಿ ಬುದ್ಧಗವಿಗಳನು
ವಾಣಿ ಮೂಕಾಗುವಳು ನೋಡಲವುಗಳನು ೧೯

ಜೈನಬಸದಿಗ್ಗಳಿಹವು ಏನು ಚೆಲುವೆಲ್ಲ
ಜಾಣ ಕಮಲಜನೊಬ್ಬ ಬಣ್ಣಿಸಲು ಬಲ್ಲ ೨೦

ಶಿವ ಶಿವಾ ! ಎಲ್ಲೂರ ಗವಿಗಳವು ಚೆಂದ
ಭುವಿಯೊಳಗೆ ಬಣ್ಣಿಸಲು ಕವಿಬುದ್ಧಿ ಮಂದ ೨೧

ನೋಡಲೇಬೇಕೊಮ್ಮೆ 'ಕೈಲಾಸ ಗುಡಿಯು'
ರೂಢಿಯೊಳು ಘನಶಿಲ್ಪ ಸೌಂದರ್ಯ ನಿಧಿಯು ೨೨

ಶಿಲ್ಪಕಲೆ ಚಿತ್ರಕಲೆ ಅಲ್ಲಿ ಪರಿಪೂರ್ಣ
ಕಲ್ಪನಾತೀತವದು ಘನಕೀರ್ತಿ ಕರ್ಣ ೨೩

ನೋಡಿದೊಡೆ ಘನಮುಕ್ತಿ ಸುಖವು ದೊರೆಯುವುದು
ನಾಡಮಾತಲ್ಲವಿದು ಶಿವನುಡಿಯೆ ಅಹುದು ೨೪

ಮುಂದೆ ಘೃಷ್ಣೇಶ್ವರ ಕ್ಷೇತ್ರವಲ್ಲಿಹುದು
ನಂದಿವಾಹನ ಮಹಿಮೆ ಮೆರೆಯುತ್ತಲಿಹುದು ೨೫

ನಮ್ಮ ಕನ್ನಡ ಜನರು ಗೆಯ್ದರಿವುಗಳನು
ಅಮ್ಮಮ್ಮ ಲೋಕವನು ಉದ್ಧರಿಸಲವನು ೨೬

# ಬನ್ನಿ-ಪೂಜೆ

ಬನ್ನಿ ಬನ್ನಿರೆಲ್ಲರಿಂದು ।
ಬನ್ನಿ ಪೂಜೆಗಾಗಿ ಹೋಗಿ ।
ತನ್ನಿ, ಚಿನ್ನ ಬೆಳ್ಳಿಗಳನು ಜಯವ ಪಡೆಯುತೆ ।
ಅಣ್ಣ ತಮ್ಮ ಅಕ್ಕ ತಂಗಿ ।
ಸಣ್ಣ ಮಕ್ಕಳೆಲ್ಲ ಕೂಡಿ ।
ಬನ್ನಿ ಪೂಜೆಮಾಡಿ ಕೂಡಿ ವಿಜಯ ಗಳಿಸಿರಿ ೧

ಸುಜಯ ಚಾಮಭೂಪನಿಂದು
ವಿಜಯ ದಶಮಿ ವೈಭವವನು ।
ನಿಜದಿ ನಡೆಸುತಿಹನು ತನ್ನ ರಾಜಧಾನಿಯೊಳ್ ।
ಅಜನ ಸೃಷ್ಟಿ ವೈಭವವನು ।
ವಿಜಯ ದಶಮಿ ಸಂಪದವನು ।
ಸುಜನರಿಂದು ನೋಡಿ ಪಾಡಿ ಮಹಿಷನಗರದಿ ೨

ಚಾಮ ಭೂಮಿಪಾಲನಿಂದು ।
ನೇಮದಿಂದ ಬನ್ನಿಪೂಜೆ ।
ಭೂಮಿಯಲ್ಲಿ ನಡೆಪನಹಹ ! ರಾಜಧಾನಿಯೊಳ್ ।
ಹೇಮರತ್ನ ಭೂಷಣಗಳ ।
ಭೂಮಿಪಾಲ ಧರಿಸುತಂದು ।
ಸೋಮಭೂಷ ನೊಲುಮೆಯಿಂದ ಬನ್ನಿಪೂಜಿಪಮ್ ೩

# ಸ್ವತಂತ್ರ ಭಾರತ

ಭಜಿಸಿರಣ್ಣ ಭರತಮಾತೆಯನ್ನು ಭಕ್ತಿಭಾವದಿಂ
ಸೃಜಿಸಿರಣ್ಣ ಸಿಡಿಲಮರಿಗಳನ್ನು ರಾಷ್ಟ್ರನಿಷ್ಠೆಯಿಂ
ಹಲವುಕಾಲ ಬಂಧನದೊಳು ಬಳಲಿದೆಮ್ಮತಾಯಿನು
ಒಲಿದು ಸೇವೆಗೆಯ್ದು ಮಾತೆ ಬಲದಬೆಟ್ಟವಾಗಲು
ಗಾಂಧಿತಾತನೆಮಗೆ ಪೇಳ್ದ ಸತ್ಯಧರ್ಮ ಮಾರ್ಗದಿಂ
ಬಂಧು ಭಾವದಿಂದ ನಡೆದು ತಾಯಿಕೀರ್ತಿಮೆರೆಸುವ ೧

ರಾಮಚಂದ್ರನನ್ನು ಸ್ಮರಿಸಿ ಪಿತೃಭಕ್ತರಾಗುವ
ಸ್ವಾಮಿಭಕ್ತ ಹನುಮನಂತೆ ಚಿರಂಜೀವಿಯೆನಿಸುವ
ಭೀಮ ಪಾರ್ಥರಂತೆ ನಾವು ಸಮರಪಟುಗಳೆನಿಸುವ
ಸಾಮ ದಾನ ಭೇದ ದಂಡ ನೀತಿಗಳನು ಮೆರೆಯುವ ೨

ಭರತಮಾತೆ ಶಕ್ತಿವಂತೆ ಕೀರ್ತಿವಂತೆಯೆನಿಸಲು
ವರಸುಪುತ್ರರೆಲ್ಲ ಕೂಡಿ ಕಾರ್ಯಗಳನು ಸಲಿಸಲು
ಹಿಂದುಸ್ಥಾನ ವಿಶ್ವದೊಳಗೆ ಮುಂದು ಮುಂದು ಎನಿಪುದು
ಗಾಂಧಿತಾತನಾತ್ಮವಲ್ಲಿ ಹರುಷದಿಂದ ನಲಿವುದು ೩

ಕೂಲಿಕಾರ ಹಣದಕಾರ ಹೊಲದ ರೈತರೆಲ್ಲರೂ
ತಾಳಿ ದೇಶಭಕ್ತಿಯನ್ನು ಜನದ ಸೇವೆಗೆಯ್ಯುವ
ಕೂಳಿಗಾಗಿ ಪರರಮನೆಯ ಬಾಗಿಲನ್ನು ಕಾಯ್ವುದಂ
ಏಳಿಸುತ್ತೆ ಭೂಮಿಯುತ್ತುಬಿತ್ತಿ ಧಾನ್ಯಬೆಳೆಯುವ ೪

ಭರತಮಾತೆ ಹರುಷದಿಂದ ಧರಣಿಯೊಳಗೆ ಮೆರೆಯಲಿ
ಸರಸ ಕಾವ್ಯಗಾನ ಕಲೆಯು ಹುರುಪಿನಿಂದ ಬಳೆಯಲಿ
ಅಣ್ಣ ತಮ್ಮ ಅಕ್ಕತಂಗಿ ಯೆನಿಪರೆಲ್ಲ ನಲಿಯಲಿ
ಅಮ್ಮ ಭರತ ಮಾತೆಯನ್ನು ಹಾಡಿ ಪಾಡಿ ತಣಿಯಲಿ ೫

# ಮಹಾತ್ಮ ಗಾಂಧಿ

ಓ! ಮಹಾತ್ಮನೆ ಶಾಂತಿಸಾಗರನೆ
ಏನೆಂದು ಬಣ್ಣಿಸಲಿ ನಿನ್ನ ಹಿರಿಮೆಯನು
ನೀ ವ್ಯಕ್ತಿಯಲ್ಲವೈ ಘನತರದ ಶಕ್ತಿಯೈ
ನೀ ಜೀವನಲ್ಲ ದಿಟ ವರಮಹಾದೇವ
ನೀ ಶಾಂತಿ ಮಾತ್ರನೇ ಕ್ರಾಂತಿಯಾಪರ್ವತವು
ನೀನೋರ್ವ ಮಾನವನೆ ದಾನವಾಂತಕನು ೧

ಭಾರತಾಂಬೆಯ ಪುತ್ರ ವರ ಪವಿತ್ರ ಸುಗಾತ್ರ
ಧೀರ ದೇಶೋದ್ಧಾರ ಶರಧಿ ಗಂಭೀರ
ಪಾರಮಾರ್ಥವಿಚಾರ ವೇದಾಗಮಾಚಾರ
ಭೂರಿ ಸದ್ಗುಣಪೂರ ಹರಿಜನೋದ್ಧಾರ ೨

ಧರೆಯೊಳಗಹಿಂಸೆಯನು ಬೆರಸಿ ಜನಜೀವನವ
ವರಬೋಧೆಯೆಂಬಂತೆ ನಡೆಸಿ ಗುಣವೆರಸಿ
ಗುರುಬುದ್ಧ ಕೃಷ್ಣರಾಮಾದಿಗಳ ತೆರನಂತೆ
ಚರಿಸಿ ಕೃತಕೃತ್ಯನಾಗಿಹ ಓ! ಮಹಾತ್ಮಾ ೩

ಭರತಮಾತೆಯ ಬಂಧನವನು ಪರಿಹರಿಸಲ್ಕೆ
ಪರಿಪರಿಯ ಉಪವಾಸ ಕಷ್ಟಗಳ ಸಹಿಸಿ
ಬರಿಯ ಕೈಯೊಳೆ ಯುದ್ಧಭೂಮಿಯೊಳು ಹೋರಾಡಿ
ಹಿರಿಯರೊಳು ಹಿರಿಯ ನೀಂ ಪಡೆದೆ ವಿಜಯವನು ೪

ಭಾರತದ ತಂದೆ, ನೀತಂದೆ ಸ್ವಾತಂತ್ರ್ಯವನು
ನಾರಿ ಕಸ್ತೂರಿಬಾಯ್ ಕೂಡಿ ನೀಬಾಳಿ
ತೋರಿದೈ ಸತ್ಯ ಧರ್ಮದ ಧೀರಪಥವನ್ನು
ಮುರಾರಿಯವತಾರಿ ಲೋಕೋಪಕಾರಿ ೫

# ಸ್ವಾತಂತ್ರ್ಯ ಸೂರ್ಯ

ಪಂಜರದಿ ಬಂಧಿಸಿದ ಗಿಳಿ ಹೊರಗೆ ಬಂದಂತೆ
ನಂಜುವೆಣ್ಣಿನ ಮೊಲೆಯ ಕುಡಿದು ಹರಿಯುಳಿದಂತೆ
ರಾಹುವಿಂ ಚಂದಿರನು ನುಸುಳಿ ಹೊಳೆಹೊಳೆವಂತೆ
ಆಹ! ಸ್ವಾತಂತ್ರ್ಯಭಾರತವಿಂದು ಶೋಭಿಪುದು. ೧

ಭೀತಿಯೆಂತೆಂಬ ಕತ್ತಲೆ ತಾನು ಓಡಿಹುದು
ಖ್ಯಾತಿಯೆಂತೆಂಬ ಹೊಂಬಿಸಲು ಹರಿಯುತ್ತಿಹುದು
ಸಾತಿಶಯ ಕಿಲ ಕಿಲ ಧ್ವನಿ ತಾನೆ ಕೇಳುವುದು
ಮಾತಿನಿಂ ಬಣ್ಣಿಪೆನೆ ಸ್ವಾತಂತ್ರ್ಯ ಸೂರ್ಯನನು. ೨

ಚರಕದಾಚಾರ್ಯನಹ ಸಬರಮತಿ ಸಂನ್ಯಾಸಿ
ಹಿರಿಯತ್ಯಾಗಿಗಳಪ್ಪ ನೆಹರು ಸರದಾರ್ ಮುಖರು
ಪರಮ ಭಾರತಮಾತೆ ಬಂಧನವ ಬಿಡಿಸುತ್ತೆ
ಧರಣಿಯೊಳು ಕೀರ್ತಿಯನು ಗಳಿಸಿದರು ಮಝು! ಭಾಪು! ೩

ಹಿಂದುಸ್ಥಾನವು ಇಂದು ಹಿಂದುಗಳಿಗಾಗಿಹುದು
ಮಂದಭಾಗ್ಯರು ಕೆಲರು ತೊಲಗಿದರು ಬೇರೆಂದು
ಒಂದು ಪಕ್ಷದಿನೋಡೆ ಇದುವೆ ಘನತರಕ್ಷೇಮ
ಎಂದು ಬಗೆಯುತೆ ಜನರು ಭಾರತಿಯ ಸೇವಿಪುದು. ೪

ಮೂಜಗದಿ ಕೀರ್ತಿಯನು ಗಳಿಸಿದಾ ಘನಮಹಿಮ
ರಾಜರ್ಷಿ ಪ್ರಿಯದರ್ಶಿ ಎನಿಸಿದ ಅಶೋಕವಿಭು
ಈ ಜಗದಿ ಸಾರನಾಥದಿ ತಾನು ಸ್ಥಾಪಿಸಿದ
ಸೋಜಿಗದ ಧರ್ಮಚಕ್ರವೆಯಿಂದು ನಮ್ಮ ಧ್ವಜ. ೫

ವಂದನೆಯು ನವರೋಜಿ, ತಿಲಕ, ಗೋಖಲೆ, ವೀರ
ಬಂಧು ವರಲಾಲಾಜಿ ಮೋತಿಲಾಲಜಿ ಮೇಣು
ಸಂದಮತಿ ಪಾಟೀಲ, ದೇಶಬಂಧು ಸುಭಾಸ
ಇಂದುಧರ ನಿಭನೆನಿಪ ಮಾಲವೀಯರಿಗಿಂದು ೬

'ವಂದೆ ಮಾತರ' ಮೆಂಬ ಧ್ವನಿ ಮೆರೆಯಲಿಳೆಯಲ್ಲಿ
ಹಿಂದುಜನಗಳು ಎಲ್ಲರೊಂದೆ ಎನ್ನುತಬಾಳ್ಗೆ
ಸಂದೇಹವಂ ತೊರೆದು ಭಾರತರು ಬದುಕುವುದು
ಗಾಂಧಿ ಮಹಿಮನ ಕೀರ್ತಿ ಧರಣಿಯೊಳು ಮೊಳಗುವುದು ೭

ಓ! ಹಿಮಾಲಯ ಪರ್ವತಾಧೀಶ ನಮಿಸುವೆನು
ಓ! ಕನ್ಯೆ ಸುಕುಮಾರಿ ಶರಣು ಶರಣೌ ನಿನಗೆ
ಗಂಗೆ ಕಾವೇರಿ ಗೋದಾವರಿ ಸುಕೃಷ್ಣೆಯರೆ
ವಂದನೆಯು ನಿಮಗೆಲ್ಲ ಭಾರತ ಸುಪುತ್ರಿಯರೆ ೮

ಕಾಶಿ ರಾಮೇಶ್ವರವೆ ಶ್ರೀಶೈಲ ಕಂಚಿಯೆ
ವಾಸುದೇವನನಿಲಯ ತಿರುಪತಿಯೆ ಉಡುಪಿಯೆ
ಭಾಸುರದ ಗೋಕರ್ಣ— ಪಂಪಾದಿಕ್ಷೇತ್ರಗಳೆ
ಈಶ ಪರಮೇಶನಾವಾಸದಿಂ ಬೆಳಬೆಳಗಿ ೯

ಜಯಜಯತು ಭಾರತಿಯೆ ಪಾವನಗುಣಾಕರೆಯೆ
ಭಯರಹಿತ ಭಾರತಿಯೆ ಸರಸಮಂಗಲ ನಿಲಯೆ
ತಾಳು ಪೂರ್ವವ ಮಹಾ ವೈಭವಂಗಳನೆಲ್ಲ
ಬಾಳು ಬಾಳೌ ತಾಯೆ ಧರಣಿಯೊಳು ಬೆಳುಜಸದಿ ೧೦

# ಇಮ್ಮಡಿ ಪುಲಿಕೇಶಿ

ಕನ್ನಡರ ದೊರೆಯೆ ಚಾಲುಕ್ಯ ಕೇಸರಿಯೆ
ಕೀರ್ತಿವನಿತೆಯ ಪತಿಯೆ ಪುಲಿಕೇಶಿ ದೊರೆಯೆ

ಗಂಗ ಕಾದಂಬ ಕೇರಳ ಚೋಳ ಪಾಂಡ್ಯರನು
ಭಂಗಿಸಿದೆ ನಿಜಭುಜ ಪರಾಕ್ರಮದೆ ನೀನು
ಗಂಗೆ ಗೋದಾವರಿಯ ನಾಡೆಲ್ಲವನು ಜಯಿಸಿ
ತುಂಗ ಯಶವನು ಪಡೆದೆ ಭಾರತೇಶ್ವರನೇ ೧

ಹರ್ಷವರ್ಧನ ನೃಪನ ನರ್ಮದೆಯ ತೀರದೊಳು
ಹರ್ಷವಡಗಿಸಿ ಜಯಿಸಿ ಸಮರದೊಳು ನೀನು
ಆರ್ಯ ದ್ರಾವಿಡ ದೇಶಗಳಿಗೆಲ್ಲ ನೀನೊರ್ವ
ಧೈರ್ಯನಿಧಿ ಹಿರಿಯರಸನೆನಿಸಿ ರಾಜಿಸಿದಯ್ ೨

ಹೀವನತ್ಸಾಂಗನೆಂದೆಂಬ ಚೀಣರ ಸಾಧು
ಭೂವಿನುತ ನಿನ್ನ ಸದ್ಗುಣ ರಾಶಿಗಳನು
ಕೋವಿದರು ತಲೆದೂಗುವಂತೆ ಬರೆದಿರ್ಪನಯ್
ಆವನೆಣೆ ನಿನಗೆಮ್ಮ ರಾಷ್ಟ್ರಪುರುಷರೊಳು ? ೩

ಪಾರಶಿಕ ನೃಪನೊಡನೆ ಕೆಳೆತನವ ಕೈಗೊಂಡು
ದೂರದೇಶಂಗಳೊಳು ಕನ್ನಡರ ಯಶವ
ಬೀರಿದಯ್ ಕೆಚ್ಚೆದೆಯ ಅಚ್ಚಕನ್ನಡಿಗ ನೀವಪ್
ಶೂರ ಧೀರರ ಒಡೆಯ ಪುಲಿಕೇಶಿ ದೊರೆಯೆ ೪

ಕನ್ನಡರ ಕಲಿತನವ ಮುನ್ನ ಜಗಕರುಹಿದಯ್
ಕನ್ನಡಾಂಬೆಯ ಕುವರ ಬುಧಜನರ ಮುಕುರ
ಕನ್ನಡದ ಕೀರ್ತಿಯದು ಭಾರತದಿ ಬೆಳಗಿದುದು
ನಿನ್ನಿಂದ ಪುಲಿಕೇಶಿ ದೊರೆಯೆ ವರಮತಿಯೆ ೫

# ವಿದ್ಯಾರಣ್ಯ ಮುನಿ

ಹಿಂದೆ ಹಿಂದೂ ಧರ್ಮ್ಮಕೊದಗಿದ |
ಕುಂದನೀಕ್ಷಿಸಿ ಮನದೆ ಮರಗುತ |
ನಂದಿವಾಹನ ರಾಜಧಾನಿಯೆನಿಪ್ಪ ಹಂಪೆಯೊಳು ||
ಅಂದು ಸಂಸ್ಥಾಪಿಸಿದೆ ರಾಜ್ಯವ |
ನೊಂದ, ಕ್ಷತ್ರಿಯ ಕುಲವ ಸಲಹಿದೆ |
ತಂದೆ, ಕೀರ್ತಿಯ ತಂದೆ! ವಿದ್ಯಾರಣ್ಯ ಗುರುರಾಯ ೧

ವೇದರಾಶಿಗೆ ಅರ್ಥವರುಹಿದೆ |
ಸಾಧುಜನಗಳ ಮಾನವುಳಿಸಿದೆ |
ಬಾಧಿಸಿದ ಯವನರಿಗೆ ಬುದ್ಧಿಯ ಕಲಿಸಿದಯ್ ನೀನು ||
ಬೋಧಿಸಿದೆ ಸರ್ವಾರ್ಥಸಾರವ |
ಸಾಧಿಸಿದೆ ನಿಜಕಾರ್ಯವೆಲ್ಲವ |
ಸಾಧುವರ್ಯ ಮಹಾತ್ಮ ವಿದ್ಯಾರಣ್ಯ ಗುರುರಾಯ ೨

ವಿಜಯನಗರವ ಕಟ್ಟಿಸಿದೆ ಮೇಣ್ |
ವಿಜಯವನೆ ಸಂಸ್ಥಾಪಿಸಿದೆ ನೀವ್ |
ಸುಜನವಂದ್ಯರೆನಿಪ್ಪ ಬುಕ್ಕಾದಿಗಳ ಮೆರೆಯಿಸಿದೆ ||
ಭಜಿಸುತಿಹ ಭಕ್ತಾಘಕನುದಿನ |
ವೃಜಿನವನೆ ನೀಗುತ್ತ ಪೊರೆದಯ್ |
ವಿಜಯ ವಿದ್ಯಾರಣ್ಯ ಗುರುಕುಲ ದೀಪ ಗತಕೋಪ ೩

ಹುಕ್ಕಬುಕ್ಕರ ಕಾಲದೊಳು ನೀವ್ |
ದಿಕ್ಕುದಿಕ್ಕಿಗೆ ರಾಜ್ಯ ಗಳಿಸಿದೆ |
ಸೊಕ್ಕಿ ಮೈಮರೆದಿರ್ದ ಯವನರ ಮದವ ಕರಗಿಸಿದೆ ||

ಅಕ್ಕರೆಯ ಕರ್ಣಾಟಕವ ನೀವ್ ।
ದಕ್ಕಿಸಿದೆ ಕ್ಷತ್ರಿಯರ ಪಾಲಿಗೆ ।
ಮಿಕ್ಕ ಮಾತೇಕಯ್ಯ ನಿನ್ನನು ಬಣ್ಣಿಸುವೊಡಳವೇ ೪

ತುಂಗಭದ್ರಾತೀರದೊಳು ಶಿವ
ಲಿಂಗದೊಳು ನಿಜಮನವನಡಗಿಸಿ ।
ಮಂಗಳಾಸ್ಪದನೆನಿಸಿ ಕುಳಿತಿಹ ನಿನ್ನ ಮೂರ್ತಿಯನು ॥
ಕಂಗಳಲಿ ನಾ ಕಂಡು ದಣಿದೆನು ।
ಭಂಗವೆಲ್ಲವ ಮರೆತು ಕುಣಿದೆನು ।
ಸಂಗದೂರ ಮಹರ್ಷಿ ವಿದ್ಯಾರಣ್ಯ ಮುನಿರಾಯಾ ೫

## ಖಾದಿಯ ಮಹಿಮೆ

೧

ಖಾದಿ ಯೆಂಬುದು ಸಂಪದದ ಗಣಿ ।
ಖಾದಿ ಯೆಂಬುದು ಬಡವರರಗಿಣಿ ।
ಖಾದಿ ಯೆಂಬುದು ನೋಡೆ ಭಾರತಿಯಾಂತ ಶೀರ್ಷಮಣಿ ॥
ಬಾಧಿಸುವ ಬಡತನಕೆ ಸುರಮಣಿ ।
ಸಾಧುಜನಕಿದು ದಿವ್ಯ ದಿನಮಣಿ ।
ಖಾದಿಯೇ ಭಾರತಕೆ ಚಿಂತಾಮಣಿಯು ಎನಿಸಿಹುದು ॥

೨

ಚರಕವೇ ಚಕ್ರಾಯುಧವು ನರ ।
ಹರಿಯೆ ಗಾಂಧಿ ಮಹಾತ್ಮನಾರಯೆ ।
ಮೆರೆವ ಪಂಡಿತ ನೆಹರು ಮುಖರೇ ದೆಸೆಯೊಡೆಯರಹರು ॥
ಪರರ ಬಟ್ಟೆಯೆ ಮೋಹಜಾಲವು ।
ಪರರ ಸೇವೆಯೆ ಸರ್ವನಾಶವು ।
ಪರರ ಬಾಧಿಪ ನರರೆ ರಕ್ಕಸರೆನಿಪರಿಳೆಯೊಳಗೆ ॥

# ಓ! ಹಿಮಾಲಯ

ಓ ! ಹಿಮಾಲಯ ಪರ್ವತಾಧೀಶ ಘನ ಮಹಿಮ
ಏನೆಂದು ಬಣ್ಣಿಸಲಿ ನಿನ್ನ ಹಿರಿಮೆಯನು

ಗಗನ ಚುಂಬಿತ ನಿನ್ನ ಗಿರಿಶಿಖರ
ಸಗ್ಗಿಗರ ನಿಚ್ಚಣಿಗೆ
ಆ ಗೌರಿಶಂಕರವು ಕಾಂಚನಗಂಗ
ಇಂದ್ರಕೀಲವು ಮೇಣು ! ೧

ಜಗವ ಪಾಲಿಪ ನಿನ್ನ ನದಿಸುತೆಯರು
ಭಾರತದ ಪಾವನ ಪ್ರಾಣನಾಡಿಗಳು ;
ಆ ಗಂಗೆ ಸಿಂಧು ಬ್ರಹ್ಮಪುತ್ರಿಯರು
ಪಾವನಾತ್ಮಕ ಶೀಲ ಸಂಪನ್ನೆಯರು ಚೆನ್ನೆಯರು ೨

ನಿನ್ನ ಗಿರಿಗಹ್ವರವು ಮುನಿ ಜನರ ಮಂದಿರವು
ನಿನ್ನೊಳಿಹ ಔಷಧಿಗಳೆಮ್ಮ ಸಂಜೀವನವು
ನಿನ್ನಮಳ ಸೌಂದರ್ಯ ಕವಿ ಬ್ರಹ್ಮನೌದಾರ್ಯ
ನಿನ್ನಮರಗಾಂಭೀರ್ಯ ಸೃಷ್ಟಿಮಾತೆಯ ಧೈರ್ಯ

ನಿನ್ನ ಸತಿ ಪಿತೃಗಳತಿ ಮನಶ್ಶಾಂತಿ
ನಿನ್ನಸುತೆ ಜಗಕೆ ಆದಿಮ ಮಾತೆ
ನಿನ್ನಸುತ ಇಂದ್ರಗಂಜದ ಖ್ಯಾತ
ನಿನ್ನಳಿಯ ಪರಮೇಶ ಎಂದೆಂದಿಗೂ ಅಳಿಯ

# ಸಾಧ್ವಿ ಕಸ್ತೂರಿ ಬಾಯಿ

ರಾಗ-ಕಾಂಬೋಧಿ, ತಾಳ-ಝಂಪೆ

ಅಗಲಿಪೋದೆಯ ತಾಯಿ ಕಸ್ತೂರಿ ಬಾಯಿ
ಜಗದ ಬಾಳನು ತೊರೆದು ಭಾರತವ ಮರೆದು

ಲೋಕವಂದ್ಯನೆನಿಪ್ಪ ಗಾಂಧಿಸತಿ ಎಂದೆನಿಸಿ
ಲೋಕೈಕ ವೀರರಹ ಪುತ್ರರನು ಪಡೆದು
ಬೇಕಾದ ರೀತಿಯಲಿ ದೇಶಸೇವೆಯ ಗೆಯ್ದು
ಸಾಕಾಗಿ ಜೀವನವನುಳಿದು ಪೋಗಿಹೆಯಾ ೧

ಅಂದು ಆಫ್ರಿಕದಲ್ಲಿ ಇಂದು ಭಾರತದಲ್ಲಿ
ಕುಂದದಿಹ ಸತಿಧರ್ಮದಿಂದ ಬೆಳಗುತಲಿ
ಎಂದೆಂದಿಗೂ ಅಳಿಯದಿಹ ಕೀರ್ತಿಯಂ ಪಡೆದೆ
ಇಂದಿರೆಯ ಅವತಾರಿ ಲೋಕೋಪಕಾರಿ ೨

ಸೀತಾನಸೂಯೆ ದ್ರೌಪದಿ ಭೈಮಿ ಸಾವಿತ್ರಿ
ಪೂತಾತ್ಮರಾದ ಭಾರತ ವನಿತೆಯರ ವೋಲ್
ಈತಿರೆಯೊಳೆಸೆದು ಪಾತಿವ್ರತ್ಯದಿಂ ಮೆರೆದು
ಸಾತಿಶಯದಿಂ ಬಾಳಿ ಬೆಳ್ಜಸವ ತಾಳಿ ೩

# 'ರಾಮರಾಜನ ಸಂದೇಶ'

ಕೊರಲಗುಗಳನು ಕರದೊಳು ಪಿಡಿಯಿರಿ
ಶೂರರೆ ನಡೆಯಿರಿ ಕಾಳಗಕೆ
ತೋರಿರಿ ನಿಮ್ಮಯ ಸಾಹಸದಿರವನು
ತೂರಿರಿ ಹಗೆಗಳ ಸೈನ್ಯವನು ೧

ಕಿಡಿಕಿಡಿ ಮಸಗುತ ಕಡುಗಲಿ ಬಂಟರೆ
ಪುಡಿಪುಡಿ ಗುಟ್ಟಿರಿ ಶತ್ರುಗಳ
ಘುಡಿಘುಡಿಸುತ ನೀವ್ ಸಿಡಿಲಿನಂದದೆ
ನಡೆನಡೆಯಿರಿ ವೈರಿಗಳೆಡೆಗೆ ೨

ವಿದ್ಯಾನಗರವ ಕಟ್ಟಿದ ಗುರುವರ
ವಿದ್ಯಾರಣ್ಯರ ಸ್ಮರಿಸುತಲಿ
ಯುದ್ಧದಿ ಶತ್ರುಗಳನು ನಡುಗಿಸಿದಾ
ಹುಕ್ಕಬುಕ್ಕರನು ನೆನೆಯುತಲಿ ೩

ಹರಿಹರರಾಯನ ಅಧಟನು ಬಗೆಯಿರಿ
ಕಂಪಣರಾಯನ ಮರೆಯದಿರಿ
ಪ್ರೌಢರಾಯನ ಕೆಚ್ಚೆದೆಯರಿಯಿರಿ
ಕೃಷ್ಣರಾಯನನು ವಂದಿಸಿರಿ ೪

ವೀರಭದ್ರನ ನಾಮವ ಭಜಿಸಿರಿ
ವಿಜಯ ವಿಠಲನನು ಪೂಜಿಸಿರಿ
ನರಸಿಂಹನ ಪದ ಭಕ್ತರೆನಿಸಿರಿ
ಪಂಪಾಪತಿಯನು ಮರೆಯದಿರಿ ೫

ಉತ್ತರ ದಕ್ಷಿಣ ಭಾರತದಲ್ಲಿ
ತುರುಷ್ಕಗಜಗಳು ಮದಿಸಿಹವು
ಹಿಂದೂರಾಜ್ಯಕೆ ಹಿಂದೂಧರ್ಮಕೆ
ಘೋರ ವಿಪತ್ತನೆ ತಂದಿಹವು ೬

ಸತ್ತಡೆ ಸ್ವರ್ಗವು ಉಳಿದಡೆ ರಾಜ್ಯವು
ಎಂಬ ತತ್ವವನು ಗಮನಿಸುತ
ಎತ್ತೆತ್ತಲು ಆಕ್ರಮಣ ಗೆಯ್ಯುತಿಹ
ಮತ್ತ ತುರುಷ್ಕರ ಓಡಿಸಿರಿ ೭

ಹಿಂದೂದೇಶಕೆ ಹಿಂದೂ ಧರ್ಮಕೆ
ಕಂಟಕರಾಗಿಹ ಯವನರನು
ಇಂದುವದನೆಯರ ನೆಳೆದೊಯ್ಯುತ್ತಿಹ
ಮಂದಮತಿಗಳನು ತರಿದಿಡಿರಿ ೮

ಇಂದಿನ ಯುದ್ಧದ ಜಯಾಪಜಯಗಳು
ಎಂದೆಂದಿಗು ಫಲವೀಯುವುವು
ಮುಂದಿನ ಪೀಳಿಗೆ ನಮ್ಮನು ಜರಿಯುತ
ಪಂದೆಯೆನ್ನದಂತೆಸಗುವುದು ೯

ಭೀಷ್ಮ ದ್ರೋಣ ಭೀಮಾರ್ಜುನ ಕರ್ಣರು
ನಮ್ಮವರೆಂಬುದ ಮರೆಯದಿರಿ
ಶತ್ರು ಸೈನ್ಯವನು ಸದೆಬಡಿದೋಡಿಸಿ
ಸಿಂಹಗಳಂದದಿ ಗರ್ಜಿಸಿರಿ ೧೦

ರಣೋತ್ಸಾಹವನು ತೋರಿಸಿರಿ
ಖಡ್ಗಗಳನು ಖಣಿಗುಟ್ಟಿಸಿರಿ
ಭುವನೇಶ್ವರಿಯನು ವಂದಿಸಿರಿ
ಭುವನದಿ ಕೀರ್ತಿಯ ಗಳಿಸಿಡಿರಿ ೧೧

ವಿಜಯನಗರದ ವಿಜಯ ದುಂದುಭಿಯ
ದಶದಿಕ್ಕುಗಳೊಳು ಮೊಳಗಿಸಿರಿ
ದೇವಾಲಯಗಳ ರಕ್ಷಿಸಿರಿ
ಹಿಂದೂರಾಜ್ಯವ ಮೆರೆಯಿಸಿರಿ ೧೨

# ನಿರಾಶೆ

೧

ಅರ್ಥರೇಖೆಯಿದ್ದು ಆಯುಷ್ಯರೇಖೆಯಿಲ್ಲದಂತಾಯಿತ್ತಯ್ಯಾ, ಸತಿಯಿದ್ದು ಸಂತಾನವಿಲ್ಲದಂತಾಯಿತ್ತಯ್ಯಾ, ಬೆಳೆಯಿಟ್ಟು ಫಲದೊರೆಯದಂತಾಯಿತ್ತಯ್ಯಾಎನ್ನಬಾಳು, ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ?

೨

ಸತ್ಕರ್ಮಕ್ಕೆ ತೊಡಗಿ ದುಷ್ಫಲಗಳ ನುಂಬುವಂತಾದುದೇಕಯ್ಯಾ, ಮಾವಿನ ಬೀಜವನಟ್ಟರೆ ಬೇವಿನ ತರು ಹುಟ್ಟಲು ಕಾರಣವೇನಯ್ಯಾ, ಸಕ್ಕರೆಯನುಂಡವರು ಬಿರುನುಡಿಗಳನಾಡಲೇಕಯ್ಯಾ ಎನ್ನೊಡೆಯ ಚಿದ್ಘನ ಲಿಂಗ ಸೋಮೇಶ್ವರಾ?

೩

ಈ ಎನ್ನ ಈ ದಂದುಗಕೆ ನಿನ್ನ ಅವಕೃಪೆ ಕಾರಣವೋ, ಎನ್ನದುರ್ವಿಧಿ ಕಾರಣವೋ, ಬಂದಕಾಲಗುಣ ಕಾರಣವೋ, ನಾನರಿಯೆ ಪೇಳಾ ಲಿಂಗ ತಂದೆ. ಎನ್ನೊಡೆಯ ಚಿದ್ಘನ ಲಿಂಗ ಸೋಮೇಶ್ವರಾ?

# 'ಶ್ರೀ ಕರ್ಣಾಟ ಮಹೀಪತಿಂ'

ಶ್ಲೋ॥ ಕರ್ಣಾಟವಸುಧಾನಾಥಂ ಜಯಚಾಮ ಮಹೀಪತಿಂ ।
ಸತ್ಯಶಾಂತಿಸಮಾಯುಕ್ತಂ ಪಾಯಾಚ್ಚಾಮುಂಡಿಕಾಂಬಿಕಾ॥ ೧

ವೃ॥ ಶ್ರೀ ಕೈಲಾಸಗಿರೀಶ್ವರಃ ಪರತರಶ್ಯಕ್ತ್ಯಾದಿ ಸಂಶೋಭಿತಃ ।
ಶ್ರೀನಂದೀಶಪರಾಶರಾದಿ ಮುನಿಹೃತ್ಕಂಜಾತವಿಭ್ರಾಜಿತಃ ।
ಶ್ರೀನಾಗೇಂದ್ರ ವಿಭೂಷಣಾಂಚಿತತನುಶ್ಶ್ರೀಪಾರ್ವತೀ ವಲ್ಲಭಃ ।
ಶ್ರೀಕರ್ಣಾಟ ಮಹೀಪತಿಂ ಜಯವಿಭುಂ ಪಾಯಾತ್ಸದಾ ಶಂಕರಃ ೨

ಕಂ॥ ಶ್ರೀಯಂ ಶ್ರೀಯರಸಂ ವಾ ।
ಕ್ಶ್ರೀಯಂ ವಾಣೀಧವಂ ಪರಾತ್ಪರನಮಳಂ ॥
ಆಯುಮನಾಪರಮೇಶ್ವರ ।
ನೀಯತೆ ಜಯಚಾಮರಾಜನಂ ರಕ್ಷಿಸುಗೆ ॥ ೩

ವೃ॥ ಆವಾತಂ ವಿಬುಧಸ್ತುತಂ ನೃಪವರಂ ಶ್ರೀಕೃಷ್ಣ ವಂಶೋದ್ಭವಂ ।
ದೇವಾಧೀಶ ವಿರಾಜಸಂಪದನರಾತಿವ್ರಾತ ವಿಚ್ಛೇದಕಂ ।
ಆವಾತಂ ಗುರುದೈವಭಕ್ತಿನಿರತಂ ಸನ್ಮಾರ್ಗಸಂಶೋಭಿತಂ ।
ದೇವಂ ಶ್ರೀ ಜಯಚಾಮರಾಜ ಜನಪಂ ಕಾಪಾಡುಗೆಮ್ಮಂ ಸದಾ॥ ೪

ವೃ॥ ಪ್ರೇಮಂಧರ್ಮದೊಳಿಚ್ಛೆಸತ್ಪುರುಷರೊಳ್ ಶೌರ್ಯಂ ಮಹಾ
ತ್ಯಾಗದೊಳ್ ।
ಕಾಮಂಸತ್ಯದೊಳಿಷ್ಟಮೀಶ್ವರನೊಳಂ ಮೇಣಾ ಪ್ರಜಾಸೇವೆಯೊಳ್।
ನೇಮಂ ವಾಕ್ಕಿನೊಳೀಜಸಂ ಪಿರಿದೆನಲ್ ಜೈಚಾಮಭೂಮೀಶ್ವರಂ ।
ರಾಮಾದ್ಯರ್ಕಳಮಾಳ್ಕೆಯಿಂದೆ ನೆಲಸಂ ಕಾಪಾಡುತಿರ್ಪಂ ಸದಾ॥ ೫

ಭೋ|| ಷ || ಪೂರ್ವಗಿರಿಯ ನೇರಿ ಭಾನು |
ಸರ್ವಜನರ ಹೃದಯಗಳಿಗ |
ಪೂರ್ವಮಪ್ಪ ತೋಷಮಿತ್ತು ಮೆರೆಯುವಂದದಿ ||
ಪೂರ್ವ ನೃಪರ ರತ್ನಪೀಠ |
ಕೋರ್ವನಾಗಿ ಚಾಮನೃಪತಿ |
ಸಾರ್ವಕಾಲ ಜಯವ ಪಡೆದು ಪೊರೆಯಲಿಳೆಯನು|| ೬

ಪ||ಷ|| ಅಡಿಗಡಿಗೊದಗಲಿ ಶುಭಜಯವೆಮ್ಮಯ |
ಪೊಡವಿಪ ಜಯಚಾಮೇಂದ್ರಗೆ ಚಂದ್ರಗೆ |
ಸಡಗರ ಬಳೆಯಲಿ ಮೈಸೂರರಸಗೆ ಸಕಲ ಕಲಾನಿಧಿಗೆ ||
ಉಡುಪತಿಯಂ ಕೆಂಜೆಡೆಯೊಳ್ ಧರಿಸಿದ |
ಮೃಡನೊಲಿದೀಯಲಿ **ಶುಭ ಸಂತಾನವ** |
ಕುಡಿವಡೆಯಲಿ ಯದುಕುಲಲತೆ ಬೆಳೆಯಲಿ ಫಲವೇರಲಿ ಸತತಂ ೭

ಭಾ||ಷ|| ತಾಯೆ ಮುನಿಹೃದ್ಧ್ಯೇಯೆ ಆದಿಮ |
ಮಾಯೆ ಜಿತದೈತೇಯೆ ಪಾವನ |
ಕಾಯೆ ಕವಿ ಜನಗೇಯೆ ಶ್ರೀಚಾಮುಂಡಿಕಾಂಬಿಕೆಯೇ ||
ರಾಯ ಜಯ ಚಾಮೇಂದ್ರ ಭೂಪಗ |
ಪಾಯ ಮಿನಿತಿಲ್ಲದೊಲು ಧರೆಯೊಳು |
ಕಾಯೆ ಕನ್ನಡತಾಯೆ ನಿಜವರ ಪುತ್ರನಂ ಮುದದಿಂ || ೮

ಕಂದ|| ಮಂಗಲವ ನೀಗೆ ಕರುಣಾ |
ಪಾಂಗಂ ಗಂಗಾಧರಂ ಸದಾಶಿವಲಿಂಗಂ ||
ತುಂಗ ಶ್ರೀ ಜಯಚಾಮನೃ |
ಪಂಗಾ ಕರ್ಣಾಟಕಾಖ್ಯ ನಾಡೊಡೆಯಂಗಂ || ೯

# ವರ್ಧಂತಿ ಕಾಣಿಕೆ

ಮಂಗಲವಾಗಲಿ ಮೈಸೂರರಸಗೆ
ಕಂಗೊಳಿಸಲಿ ಕನ್ನಡನಾಡು
ತುಂಗ ಗುಣಾಕರ ಜಯಚಾಮೇಂದ್ರನ
ಗಂಗಾಧರ ಶಿವ ಕರುಣಿಸಲಿ ೧

ಕನ್ನಡ ನಾಡೊಳು ಕನ್ನಡ ಜನರೊಳು
ಮೈಸೂರ್ ಬಾವುಟ ಶೋಭಿಸಲಿ
ಕನ್ನಡ ಕುಲವುಂ ಕನ್ನಡ ಕಲೆಯುಂ
ಮೈಸಿರಿಯಾಂತಭಿವರ್ಧಿಸಲಿ ೨

ಹಿಂದೂ ಧರ್ಮಕೆ ಹಿಂದೂಸ್ಥಾನಕೆ
ಎಂದೆಂದಿಗು ಶುಭವಿರುತಿರಲಿ
ನಂದಿವಾಹ ಪರಮೇಶನ ದಯೆಯಿಂ
ಸುಂದರ ಜಯನೃಪ ವರ್ಧಿಸಲಿ. ೩

:★:

# ದೈವವಿಲ್ಲದ ಜೀವನ

ಸತಿಯಿದ್ದು ಸಂತಾನವಿಲ್ಲದಂತೆ, ಪಾಂಡಿತ್ಯವಿದ್ದು ಪ್ರತಿಭೆಯಿಲ್ಲದಂತೆ, ವೇಷವಿದ್ದು ವೈರಾಗ್ಯವಿಲ್ಲದಂತೆ, ಕೆರೆಯಿದ್ದು ನೀರಿಲ್ಲದಂತೆ, ತರುವಿದ್ದು ಫಲವಿಲ್ಲದಂತೆ, ಧರೆಯಿದ್ದು ಧಾನ್ಯವಿಲ್ಲದಂತೆ ಕುಲವಿದ್ದು ಚಲವಿಲ್ಲದಂತೆ, ಪ್ರಯತ್ನವಿದ್ದು ಪರಿಣಾಮವಿಲ್ಲದಂತೆ, ಗುಡಿಯಿದ್ದು ಗೋಪುರವಿಲ್ಲದಂತೆ, ಆಕಳಿದ್ದು ಅಮೃತವಿಲ್ಲದಂತೆ, ವಾಸನೆಯಿಲ್ಲದ ಹೂವಿನಂತೆ ಆಯಿತ್ತೆನ್ನ ಬಾಳು! ತೂತು ಮಡಕೆಯ ನೀರಿನಂತೆ ಹೋಯಿತ್ತೆನ್ನ ಜೀವನ ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರನ ದಯೆಯಿಲ್ಲದಕಾರಣ.

# ಶತ್ರು-ಮಿತ್ರ

ರಾಗ_ಕಾಂಬೋಧಿ ತಾಳ_ಝಂಪೆ

ಓ 'ಶತ್ರು' ಮಹನೀಯ ಶರಣಾರ್ಥಿ ನಿನಗೆ
ಎನ್ನ ದುರ್ಗುಣಗಳನು ತೋರಿದುದರಿಂದ ||ಪ||

ಓ 'ಮಿತ್ರ' ಬಾಂಧವನೆ ನಿನಗೆ ವಂದನೆಯು
ಎನ್ನ ಕಿಂಚಿತ್‌ಗುಣವ ಮೆಚ್ಚಿದುದರಿಂದ ||ಅ. ಪ||

ಗುಣದೋಷ ಮಿಶ್ರವೀ ನರಜನ್ಮವೆನ್ನುತಲಿ
ಅನುನಯದಿ ಪೇಳ್ವರಯ್ ಅನುಭವಿಗಳು
ಗುಣದಿ ಇಹಪರ ಮೇಣು ದೋಷದಿಂ ದುರ್ಗತಿಯು
ಮನುಮುನಿಗಳೊಮ್ಮತದಿ ಪೇಳ್ದರೀಫಲವಂ ೧

ಅರಿಯದಂದದಿಯೆನ್ನ ಜೀವನದಿ ಬೆರೆದಿರ್ಪ
ದುರಿತ ಗುಣಗಳ ಕೃಪೆಯ ಮಾಡಿತೋರುವನು
ಉರು 'ಶತ್ರು'ವೆಂತಪ್ಪ? ನೋಡೆ ಬಾಂಧವನವನು
ಧರೆಯೊಳಿಂತಪ್ಪ ಬಾಂಧವರೆನಗೆ ಇರಲಿ ೨

ಇರ್ಪ ಸದ್ಗುಣಗಳನು ಔದಾರ್ಯದಿಂ ಗ್ರಹಿಸಿ
ಸರ್ಪಭೂಷಣನೊಲುಮೆಯಪ್ಪ ಮಾರ್ಗವನು
ತೋರ್ಪ ಗೆಳೆಯನ ದಯೆಯನೆಂತು ಪೊಗಳಲಿ ನಾನು
ದರ್ಪಕಾರಿಯೆ ಕೊಡುಕೊಡೆನಗೆ ಗೆಳೆಯರನು ೩

ಜೀವನದ ಏಳಿಗೆಗೆ ಬೇವು-ಬೆಲ್ಲವು ಬೇಕು
ಭೂವಿನುತ ಸುಖ-ದುಃಖವೆಲ್ಲ ಬೇಕು
ಆವುದೂ ವ್ಯರ್ಥವಲ್ಲೀಧರೆಯೊಳೆಂಬುದರಿ
ನೇವೇಳ್ವೆ 'ಶತ್ರು-ಮಿತ್ರ'ರ ಬೇಡವೆನಲೇ! ೪

ಊರು ಹಸನಾಗಿರಲು ಹಂದಿ ಮೊದಲಿರಬೇಕು
ಕೇರಿ ಶುಚಿಯಾಗಿರಲು ನಿಂದಕರು ಬೇಕು
ಧಾರಿಣಿಯು ಬೆಳಗಲು 'ಶತ್ರು-ಮಿತ್ರ'ರು ಬೇಕು
ಮಾರಾರಿಯೊಲುಮೆ ಎಂದೆಂದಿಗೂ ಬೇಕು ೫

—:★:—

## ಅನುಗ್ರಹಿಸಯ್ಯಾ ?

೧. ಮಕ್ಕಳು ಬೆಲ್ಲವ ಬಯಸದೆ ಬೇವ ಬಯಸುವರೇ ಅಯ್ಯಾ, ರಸಿಕರು ಮಾಧುರ್ಯವನಿಚ್ಛಿಸದೆ ಕಾಠಿಣ್ಯವ ನಾಶಿಪರೇ ಅಯ್ಯಾ, ಕವಿಗಳು ನಂದನವನರ ಸದೆ ಮರುಭೂಮಿಯನರಸುವರೇ ಅಯ್ಯಾ, ಏರುಂಜವ್ವನೆ ತರುಣಪತಿಯ ನಲ್ಲದೆ ವೃದ್ಧನನಾಶಿಪಳೇ ಅಯ್ಯಾ, ಅಂತೆನ್ನಮನ ಸಂತಸದ ಬಾಳನಾಶಿಸಿದರೆ ಅಪರಾಧವೇ ಅಯ್ಯಾ ?

೨. ನರನ ಬಾಳುವೆ ಮಿಗಿಲೆಂದು ಪೇಳಿಲ್ಲವೇನಯ್ಯಾ ಶಾಸ್ತ್ರಕಾರರು. ಅಂತಪ್ಪ ಅಮೌಲ್ಯಜೀವನವ ದಂದುಗದೊಳು ಕಳೆವುದನುಚಿತವಲ್ಲವೇ ಪ್ರಭು ವೇ? ಭಕ್ತನಾದೆನ್ನ ಜೀವನದುಃಖಶರಧಿಯಾಗುವ ಪರಿಯನೇಕೊದಗಿಸಿದೆ ಅಯ್ಯಾ, ನಾ ನಿನಗೆ ದ್ರೋಹಿಯೇ? ನೀ ನೆನಗೆ ಬೇಡದವನೇ, ನಾನೀನೆಂಬ ಭೇದವಿಲ್ಲದ ಸೋಹಂಶಿವ ಏಕಿಂತೆನ್ನ ಸಂತಸಕೆ ದೂರವೆನಿಸಿದೆ ಅಯ್ಯಾ?

೩. ಆಗಸದಲಾಡುವ ಹಕ್ಕಿಗಳು, ಅಡವಿಯಲೋಡುವ ಮೃಗಜಾತಿ ಗಳು, ಸಾಗರದಲಿರುವ ಜಲಜಂತುಗಳು ಸುಖಸಂಕಥಾ ವಿನೋದದಿಂದಿ ರಲು ಇವೆಲ್ಲಕೂ ಮಿಗಿಲಾದ ಮಾನವಜೀವಿಗೆ ಸುಖವಿರಬಾರದೇ ತಂದೆ? 'ತೇನ ವಿನಾ ತೃಣಮಪಿ ನಚಲತಿ' ಎಂಬಂತೆ ನಿನ್ನ ಕೃಪೆಯಿಲ್ಲದೆಸುಖವೆಲ್ಲಿ ?

೪. ಎನಗೆ ಸಂತಸವಪ್ಪ ಪರಿಯ ಕೇಳಯ್ಯಾ ಕೃಪಾನಿಧಿ, ಅನುಭವಿ ಗಳ ಸಂಗ, ಶಿವಾಗಮಗಳ ಪಠನ, ತೀರ್ಥ ಕ್ಷೇತ್ರಗಳ ಸಂಚಾರ, ಬಡಜನರ ಸೇವೆ, ಅನಾಥ ಶಿಶುಗಳ ಸಂರಕ್ಷಣೆ, ಅಹಿಂಸೆಯ ಜೀವನ, ಗ್ರಂಥಾಲಯಗಳ ಸ್ಥಾಪನೆ, ಧರ್ಮಗ್ರಂಥಗಳ ಪ್ರಕಟನೆ ಈ ಸತ್ಕರ್ಮಗಳ ನೆಸಗಿ ಸಂತಸದಿಂ ಜೀವಿಸುವಂತೆನ್ನನನುಗ್ರಹಿಸಯ್ಯಾ ಎನ್ನೊಡೆಯ ಚಿದ್ಘನಲಿಂಗಸೋಮೇಶ್ವರಾ!

# ಅಹಿಂಸೆಯ ವಿಜಯ

ರಾಮಚಂದ್ರ ಧರ್ಮಕಾಗಿ ಯುದ್ಧ ಮಾಡಿದ
ರಾವಣಾದಿ ರಾಕ್ಷಸರನು ದಮನಮಾಡಿದ
ಧರ್ಮರಾಯ ರಾಜ್ಯಕಾಗಿ ಕದನವಾಡಿದ
ತಮ್ಮ ಬಂಧುಸೋದರರನೆ ನಾಶಮಾಡಿದ ೧

ಶಿವನು ತ್ರಿಪುರ ನಾಶದಂದು ಶಸ್ತ್ರ ಹಿಡಿದನು
ತನ್ನ ಭಕ್ತವೃಂದವನ್ನೆ ಸದೆಯಬಡಿದನು
ಹರಿಯು ಬಲಿಯ ಮನೆಗೆ ಹೋಗಿ ಭಿಕ್ಷೆ ಬೇಡಿದ
ಬೋಳ ಬಲಿಯ ಮೋಸಮಾಡಿ ತುಳಿದುಹಾಕಿದ ೨

ನಮ್ಮ ಗಾಂಧಿ ತಾತನಿಂದು ಯುದ್ಧ ಹೂಡಿದ
ನೆಮ್ಮಿ ಸತ್ಯಧರ್ಮಗಳನು ಕದನವಾಡಿದ
ಗಮ್ಮನೆಲ್ಲ ಶತ್ರುಜಾಲ ಮಂಕು ಬಡಿದರು
ಸುಮ್ಮನಿತ್ತು ರಾಜ್ಯವನ್ನು ಹೊರಟು ಹೋದರು ೩

ಮದ್ದು ಇಲ್ಲ ಗುಂಡು ಇಲ್ಲ ಯುದ್ಧವಾಯಿತು
ಕತ್ತಿಯಿಲ್ಲ ಕಹಳೆಯಿಲ್ಲ ವಿಜಯ ಲಭಿಸಿತು
ಸದ್ದುಮಾಡದೆಮ್ಮಶತ್ರು ಮಿತ್ರರಾದರು
ಬುದ್ಧಿವಂತ ಗಾಂಧಿ ಗುರುವ ಹೊಗಳುತಿರ್ಪರು ೪

ಜಯದ ಮೂಲವೆಲ್ಲಿ ಎಂಬುದನ್ನು ಗಾಂಧಿಜಿ
ಭಯವದಿಲ್ಲದಿರ್ಪ ಸತ್ಯಧರ್ಮವೆಂಬುದು
ನಯ ಅಹಿಂಸೆ ಮಾರ್ಗವೆಂದು ಬೋಧಿಸಿರ್ಪನು
ಜಯದ ದಾರಿಯನ್ನು ನಮಗೆ ತೋರಿಸಿರ್ಪನು ೫

# ಸರ್ವಜ್ಞನಿಗೆ

ಸರ್ವಜ್ಞವಚನಗಳ-ಸುರ್ವರೆಯೊಳೋದುತ್ತ ।
ಗರ್ವ ಮಾತ್ಸರ್ಯ ದುರ್ಗುಣಂಗಳ ತೊರೆದು ।
ಸರ್ವರುಂ ಬಾಳ್ಗೆ-ಸರ್ವಜ್ಞ ॥ ೧

ವೇದ ಶಾಸ್ತ್ರಂಗಳನು ಸಾಧಿಸುವ ಶ್ರಮವೇಕೆ ।
ಸಾಧು ಸರ್ವಜ್ಞ ಮೂರುತಿಯ ವಚನಗಳ ।
ನಾದರಿಸಿ ಕೇಳಿ-ಸರ್ವಜ್ಞ ॥ ೨

ಕನ್ನಡತಿಯೆಂಬುವಳು ಬನ್ನಕೊಳಗಾಗಿಹಳು ।
ತನ್ನ ಗೆಳತಿಯರ ಸರಿದೊರೆಗೆ ಬಾರದಲೆ ।
ಕಣ್ಣೀರೊಳಿಹಳು-ಸರ್ವಜ್ಞ ॥ ೩

ಜಾತಿ ಜಾತಿಗಳಲ್ಲಿ ಜಾತಿ ಮತ್ಸರವುಂಟು
ಮಾತಿನೊಳಗೆಸುಂಟು ವೈರಾಗ್ಯ ಬಹುಜನಕೆ ।
ನೀ ತಿಳಿದುನೋಡ-ಸರ್ವಜ್ಞ ॥ ೪

ನಿನ್ನ ಕಾಲದ ಚೆಲುವು ಇನ್ನಿರ್ಪುದೆಂಬೆಯಾ ?
ಕುನ್ನಿಮಾನಿಸರು ತುಂಬಿಹರು ನಾಡಿನೊಳು ।
ಅನ್ನೆಯವೆ ಹಿರಿದು-ಸರ್ವಜ್ಞ ॥ ೫

ಗುಡಿಗಳನು ಕಟ್ಟುವರು ಮಡಗುವರು ಗೊಂಬೆಗಳ ।
ಬಡವರನು ಮರೆತು ಸಡಗರದಿ ಪೂಜಿಪರ ।
ಮೃಡನು ಮೆಚ್ಚುವನೆ-ಸರ್ವಜ್ಞ ॥ ೬

ಗುರುಗಳೊಳಗೆನಿಬರೊ ಬರಿಯಡಂಭದೊಳಿಹರು ।
ಹರಿಗೋಲು ತೂತು ಬಿದ್ದಂತೆ ಅವರಿರವು ।
ಧರೆಗೆ ಕೇಡಕ್ಕು-ಸರ್ವಜ್ಞ ॥ ೭

ಕನ್ನಡದ ಸೌಭಾಗ್ಯವಿನ್ನೊಮ್ಮೆ ಮೆರೆಯಲ್ಕೆ ।
ಕನ್ನೈದಿಲೆಯು ಚಂದ್ರನುದಯಮಂ ಕಂಡಂತೆ ।
ಇನ್ನೊಮ್ಮೆ ಬಾರ–ಸರ್ವಜ್ಞ ॥ ೮

ಕ್ರಿಸ್ತಮತಸಂಭವನು, ಉತ್ತುಂಗಿ ಎಂಬುವನು ।
ಸಿಸ್ತಿನಿಂ ನಿನ್ನ ವಚನಗಳ ಸರಿಗೊಳಿಸಿ ।
ಮತ್ತೆ ಮೆರೆಸಿದನು–ಸರ್ವಜ್ಞ ॥ ೯

—:★:—

# ಕಡಲೆಯ ಗಣಪತಿ

ಕಡಲೆಯ ಗಣಪತಿ ವೃಷಶಿವನಣುಗನೆ
ಕೊಡು ಕೊಡು ವರಗಳ ಪೊಡವಿಯ ಜನಕೆ ೧

ಅಕ್ಕಿಯ ರಾಗಿಯ ಸಕ್ಕರೆ ಗೋಧಿಯ
ಮಿಕ್ಕಿಹ ಧಾನ್ಯವ ಮುಕ್ಕಣನಣುಗನೆ ೨

ವಿದ್ಯೆಯ ಬುದ್ಧಿಯ ಸದ್ಯಶದಾಯುವ
ಮುದ್ದಿನ ಗಣಪತಿ ಉದ್ಧರಿಸಿತ್ತು ೩

ಹಂಪೆಯ ಗಣಪನೆ ಪೆಂಪಿನ ದೇವನೆ
ಕೊಂಪೆಯೊಳೆಲ್ಲರ ಸೊಂಪಿನೊಳಿರಿಸಯ್ ೪

ರಾಯರಕಾಲದ ಶ್ರೇಯವ ನೀಯುತೆ
ಆ ಯದುಚಾಮುಗೆ ಪ್ರೇಯವನೀಯಯ್ ೫

ಕನ್ನಡ ಶಿಶುಗಳ ಕನ್ನಡ ನುಡಿಯನು
ಕನ್ನಡಜನರನು ಉನ್ನತ ಗೊಳಿಸಯ್ ೬

# ಶರಣ ಸಾಹಿತ್ಯ ಶಿಶು

ಕರುಣಾಳು ಪರಮೇಶ ನಿನ್ನ ಪ್ರೇರಣೆಯಂತೆ
ಶರಣಸಾಹಿತ್ಯ ಶಿಶು; ಜನಿಸಿರ್ಪುದಯ್
ಧರಣಿಯೊಳು ಚಿರಜೀವಿಯೆನಿಸಿ ಬಾಳುವತೆರದೆ
ಪರಸುತ್ತೆ ಸಲಹು ನೀಂ ಗಿರಿಜೆಯರಸಾ ೧

ಶರಣಜನ ಸುರಧೇನು ಶರಣಜಲನಿಧಿ ಚಂದ್ರ
ಶರಣಜನಬಂಧು ನೀನೆಂಬರಲ್ತೇ ?
ಶರಣಸಾಹಿತ್ಯಮಂ ಹರಸಿ ಪಾಲಿಸದಿರಲು
ಧರಣಿಯೊಳು ಪ್ರಭುವಿಗದು ಕೊರತೆಯಲ್ತೆ? ೨

ಗುರು ನೀಲಕಂಠಾರ್ಯ ವರರೇಣುಕಾಚಾರ್ಯ
ಹರರೂಪ ಬಸವೇಶ ಮುಖ್ಯರೊರೆದ
ಸರಸವೇದಾಗಮಾದ್ಯುರುಶಾಸ್ತ್ರಸಾರಮಂ
ಶರಣಸಾಹಿತ್ಯದಿಂ ನುಡಿಸು ದೇವಾ ೩

ಹರನಣುಗ ಹರಿಹರಂ ಕರುಣಾಳು ರಾಘವಂ
ಕೆರೆಯ ಪದ್ಮರಸ ನಿಜಗುಣಯೋಗಿಯು
ಉರುಶಾಸ್ತ್ರಕೋವಿದಂ ಕವಿ ಷಡಕ್ಷರದೇವ
ಗುರುಪಂಡಿತಾರಾಧ್ಯ ಭೀಮಕವಿಗಳ್ ೪

ಧುರಧೀರ ಲಕ್ಕಣ್ಣ ವರಮಂತ್ರಿ ಜಕ್ಕಣ್ಣ
ಪರಮಗುರುವಾ ಗುಬ್ಬಿಮಲ್ಲಣಾರ್ಯಂ
ಸರಸ ಸರ್ವಜ್ಞಕವಿ ಹರಭಕ್ತ ಬಸವಕವಿ
ಶರಣಸಾಹಿತ್ಯಕೊಳ್ನುಡಿಗಲಿಸುಗೆ ೫

ಹರಮತದ ಸೇವೆಯಂ ಕರುನಾಡ ಸೇವೆಯಂ
ವರಭಾರತದ ಧರ್ಮಜನ ಸೇವೆಯಂ
ಪರಮ ಋಷಿಗಳ ಸೇವೆ ಸಾಧು ಶರಣರಸೇವೆ
**ಶರಣಸಾಹಿತ್ಯ**ದಿಂ ನಡೆಸು ದೇವಾ ೬

ಗುರುಚೆನ್ನಬಸವೇಶ ವರತೋಂಟದಾರಾಧ್ಯ
ಹರನ ಕೈಸೆರೆವಿಡಿದ ಮಹದೇವಿಯು
ಪರಮಗುರು ಪ್ರಭುದೇವ ಸಿರಿಮರುಳಸಿದ್ಧೇಶ
ರಿ ರದೆ ಹರಸಲಿ ತಮ್ಮ **ಶಿಶುವನಿದನು** ೭

ಮಾನಾಪಮಾನವಂ ಸ್ತುತಿನಿಂದೆ ಜಾಲವಂ
ಮೌನಿಹೃದಯ ನಿವಾಸ ನಿನಗರ್ಪಿಸಿ
ನಾನೆಂಬಹಂಕಾರ ರೋಗವಂ ವರ್ಜಿಸುತೆ
ಜ್ಞಾನನಿಧಿ ಚರಿಸಂತೆ ಹರಸುತಂದೆ ೮

'ಶರಣಸತಿ ಲಿಂಗಪತಿ' ಭಾವವಂ ಯೋಚಿಸಲು
ಶರಣಜನರಭ್ಯುದಯ ನಿನ್ನದಲ್ತೆ ?
**ಶರಣಸಾಹಿತ್ಯ** ವಿದಕಾಗಿ ದುಡಿಯುವುದಲ್ತೆ
ಪರಮೇಶ ಇದು ನಿನ್ನ ಸೇವೆಯಲ್ತೆ ? ೯

# ಗಣಪೆ ಬಳ್ಳಿ

ಗಣಪೆಯ ಬಳ್ಳಿ ಗಣಪೆಯ ಬಳ್ಳಿ
ಎಂಬುವ ಲತೆಯೊಂದಿರುತಿಹುದು
ಗಣನಾರ್ಹವು ಎಂದೆನಿಸಿಕೊಂಡಿಹುದು
ಮಲೆನಾಡಿನ ಕಾಂತಾರದೊಳು ೧

ಮರದಿಂ ಮರಕೆ ಗಿಡದಿಂ ಗಿಡಕೆ
ಕಾಡಿಂ ಕಾಡಿಗೆ ಹಬ್ಬುತಲಿ
ಹರಿದಾರಿಯ ಉದ್ದುದ್ದಕೆ ಪಸರಿಸಿ
ಬನವೆಲ್ಲವನೂ ಬಳಸಿಹುದು ೨

ಈ ಬಳ್ಳಿಯ ಮೂಲವ ಹುಡುಕುವನು
ಆ ಬೊಮ್ಮದ ಪರಿಯರಿಯುವನು
ಈ ಬಳ್ಳಿಯ ವ್ಯಾಪನೆಯರಿಯುವನು
ಆದಿಮ ಮಾಯೆಯ ತಿಳಿಯುವನು ೩

ಕುಲ ಜಾತಿಗಳೊಂದನು ಲೆಕ್ಕಿಸದೆ
ಕುಜ ಕುಲವೆಲ್ಲವ ಬಳಸಿಹುದು
ತಿಳಿದವನೆನಿಸುವ ಬ್ರಹ್ಮವಾದಿಯ
ಪರಿಯನೆ ತನ್ನೊಳು ತೋರುವುದು ೪

ಮಲೆನಾಡಿನ ಅತಿ ವಿಚಿತ್ರ ವಿಷಯದಿ
ಗಣಪೆಯು ಬಳ್ಳಿಯು ಹಿರಿದೆನಿಸಿ
ಸವಿಗಾರರ ಕಡುಜಾಣರ ಗಡಣಕೆ
ಬೆಸವಂದವನುರೆ ಬೀರುವುದು ೫

ಮಲೆನಾಡಿನ ಸಿರಿ ಬೆಡಗನು ನೋಡಲು
ಕಬ್ಬಿಗನೊಬ್ಬನು ಹೋಗಿರಲು
ಕೊಬ್ಬಿದ ಗಣಪೆಯ ಬಳ್ಳಿಯು ಕೇಳಿತು
ಹುಬ್ಬನು ಹಾರಿಸಿ ಕಬ್ಬಿಗನ ೬

ಕವಿರತ್ನನೆ ನೀನರಿತಿಹೆ ಯೇನಯ್ಯ
ಕಾವ್ಯಾರಣ್ಯದ ಬಣ್ಣನೆಯೊಳ್
ತಾಲ ತಮಾಲ ರಸಾಲ ತಿಂತ್ರಿಣಿ ೭
ವೃಕ್ಷಜಾಲಗಳ ಸಾಲಿನೊಳು

ಅವನೆಲ್ಲವನಾಲಿಂಗಿಸಿ ಸುಖಿಸುವ
ಗಣಪೆಯ ಬಳ್ಳಿಯ ನಾಮವನು
ಗುಣಗಣ ಶೋಭಿತ ಬಳ್ಳಿಯನು
ಅನುನಯದಿಂದಲಿ ಹೇಳಿದನು ? ೮

# ನೆಲ ಸಂಪಿಗೆ

ಮರಸಂಪಿಗೆಯನು ನೋಡಿಹ ಜನಗಳು
ನೆಲಸಂಪಿಗೆಯನು ಕಂಡಿಹಿರೇ?
ನೆಳಲೊಳು ಹಂಗಿಲ್ಲದೆ ತಾಬೆಳೆವುದು
ಮಲೆನಾಡಿನೊಳಿದು ನೆಲೆಸಿಹುದು ೧

ಭೂಮಿಯನಪ್ಪಿಹ ತಾರೆಗಳಂದದಿ
ಕೋಮಲ ಪುಷ್ಪಗಳಿರುತಿಹವು
ಆ ಪರಮೇಶನ ಸೃಷ್ಟಿಯೊಳಿವುಗಳ
ಜನುಮವೆ ಅಚ್ಚರಿ ಎನಿಸಿಹುದು ೨

ಬಿಳಿಯ ನೀಲಿ ಕೆಂಬಣ್ಣದಿ ಕೂಡುತ
ಕಳಕಳಿಸುತ ಬಲುಕಂಪಿಸುತ
ಕುಲು ಕುಲು ನಗುತ ಅಳಿಗಳ ಕರೆವುತ
ಇಳೆಯೊಳು ಮೋದವ ಬೀರುವುದು ೩

ಸಂಪದವಿದ್ದರು ಗರ್ವಿಸದಿರುತಿಹ
ಸಜ್ಜನರಂದದಿ ಲೋಕದೊಳು
ಸಂಪಿಗೆ ವಿನಯವ ಬೋಧಿಸುತಿರುವುದು
ಗರ್ವಿತಜನರಿಗೆ ನೀತಿಯನು ೪.

ಕಮಲದ ಚೆಲುವನು ಮಲ್ಲಿಗೆ ಕಂಪನು
ಗುಲಾಬಿ ಹೂವಿನ ಶೋಭೆಯನು
ನೆಲಸಂಪಿಗೆ ತಾನಣಕಿಸುತಿದ್ದರು
ಕವಿ ಕಾವ್ಯಕೆ ಕಣ್ಮರೆಯಹುದು ೫

ಗುಣವಿದ್ದರು ಬಲು ಸಿರಿಯಿದ್ದರು
ಈ ತಿರೆಯೊಳು ಜಸವನು ಪಡೆಯಲಿಕೆ
ಪರಶಿವನೊಲುಮೆಯು ಬೇಕೆಂಬುದನೀ
ದುರದೃಷ್ಟದ ಪೂ ಪೇಳುವದು ೬

ಗೆಳೆಯರೆ ಮಲೆನಾಡಿಗೆ ಹೋಗಿ
ನೆಲಸಂಪಿಗೆಯನು ಚೆನ್ನಾಗಿ
ಮರೆಯದೆ ನೋಡಿರಿ ಹಾಯಾಗಿ
ಇಳೆಯ ವಿಚಿತ್ರಕೆ ತಲೆಬಾಗಿ ೭

—:★:—

## ಶ್ರೀ ಅವರು

ಕನ್ನಡದ ಕಲಿಯೆ ಕಣ್ಮರೆಯಾಗಿ ಪೋದೆಯಾ
ರನ್ನ ಜನ್ನರ ತೆರದಿ ಜಸದೊಡಲನಾಂತೆಯಾ ೧

ಬೆಳ್ಳೂರು ಮೈಲಾರ ಶ್ರೀಕಂಠ ಕವಿವರನೆ
ಬೆಳ್ಳಿಬೆಟ್ಟದ ಒಡೆಯನೊಲುಮೆಯನು ಪಡೆದವನೆ ೨

ಇನ್ನೆಲ್ಲಿ ಕನ್ನಡದ ಕ್ರಾಂತಿ ದೀಪದ ಕಾಂತಿ |
ಇನ್ನೆಲ್ಲಿ ಕನ್ನಡಿಗರುತ್ಕ್ರಾಂತಿ ಮೇಣ್ ಶಾಂತಿ ೩

ಕರ್ಣಾಟಮಾತೆ ಕಣ್ಣೀರಿನಿಂ ನಾಂದಿಹಳು |
ಇನ್ನಿಂಥ ಮಗನ ನಾ ಪಡೆದಪೆನೆ ಎನುತಿಹು ೪

ರಾಜಸೇವಾಸಕ್ತ ಶ್ರೀಯು ಕಣ್ಮರೆಯಾಗೆ |
ರಾಜನಿಲ್ಲದ ಕುಮುದದಂತಾಗೆ ಬುಧನಿವಹ ೫

ಪಾಂಚಭೌತಿಕ ದೇಹ ಕಣ್ಮರೆಯದಾಗಿಹುದು |
ಮಿಂಚಿನಂದದಿ ಕೀರ್ತಿ ದೇಹ ಹೊಳೆಯುತ್ತಿಹುದು ೬

# ಗುರು ಬುದ್ಧದೇವ

ಓ ಶಾಂತಿನಿಧಿಯೆ,ಏಷಿಯಃದ ದಿನಮಣಿಯೆ,
ಕಪಿಲವಸ್ತುವಿನಲ್ಲಿ ಜನಿಸಿದರಗಿಳಿಯೆ–
ಶಾಂತಿಭಿಕ್ಷೆಯನೀಡು ದಾಂತಿಯನು ಕೃಪೆಮಾಡು
ಭ್ರಾಂತಿಯಿಂ ಕೂಡಿರ್ಪ ಜಗದ ಜನಗಳಿಗೆ ೧

ಎಸೆವ ರಾಜ್ಯೈಶ್ವರ್ಯರಾಶಿಯೆಲ್ಲವನೊಮ್ಮೆ
ಕಸದಂತೆ ಕಡೆಗಂಡು ಘನವಿರತಿಯನು ಪಡೆದು-
ಜನನ-ಮರಣಗಳೇನು, ನನಗಿದೇತಕೆ ಎಂಬ
ಅನುವತಿಳಿದವನುಸಾಧಿಪ ಮನವನೀಯಯ್ ೨

ಧರ್ಮರಾಜ್ಯದೊಳಿರುವ ಮರ್ಮವನು ಬೋಧಿಸಯ್
ಧರ್ಮಸ್ವರೂಪ ಗುರುವರ ಗೌತಮಾರ್ಯಾ
ಬುದ್ಧಿಯನು ಕೊಡು ಎನಗೆ ಶುದ್ಧತನದಿಂ ಬಾಳ್ವ
ಸಿದ್ಧನೆಂದೆನಿಸೆನ್ನ ಗುರುಬುದ್ಧದೇವಾ ೩

ಮೋಹದಾಕರ್ಷಣವನೆಂತು ಜಯಿಸಿದೆ ನೀನು ?
ದೇಹಸ್ವಭಾವವಂ ಗೆಲಿದೆಯೆಂತು ?
ಕಾಮಕ್ರೋಧವ ಗೆಲಿದು ಪ್ರೇಮವನು ನೆಲೆಗೊಳಿಸಿ
ಭೂಮಿಯನು ಸ್ವರ್ಗಮಯವೆನಿಸಿದೆಂತು ? ೪

ಸಾಕು ಸಾಕೀಲೋಕ ಬೇಕು ನಿನ್ನಯ ಲೋಕ
ಏಕೆ ಕೃಪೆಮಾಡದಿರುತಿರ್ಪೆ ಎನ್ನುವನು
ಸತ್ತು ಚಿತ್ತಾನಂದವೆನಿಪ ಪದವಿಯನಿತ್ತು
ಎತ್ತು ಭವಮಾಲೆಯಿಂ ಬಳಲುವೆನ್ನುವನು ೫

# ನಮ್ಮವರು-ಅನ್ಯರು

ರಾಗ_ಕಾಂಬೋಧಿ, ತಾಳ_ಝಂಪೆ

ಆರು ನಮ್ಮವರು ? ಅನ್ಯರಾರು ? ||ಪ||
ಧಾರಿಣಿಯೊಳಿದರರಿವ ತಿಳಿದರಾರು ? ||ಅ. ಪ||

ತನುವಿನೊಳು ಪುಟ್ಟಿರ್ಪ ರೋಗಗಳು ನಮ್ಮವೇ ?
ಮನೆಯ ಹಾಳ್ಗೆಯ್ವ ಮೂಷಕ ನಮ್ಮವೇ
ಮನಸಿನೊಳು ಹುಟ್ಟುವಾ ಷಡ್ವರ್ಗ ನಮ್ಮವೇ ?
ಅಸುನಯದಿ ಮೆಯ್ಯೊಳಿಹ ಕ್ರಿಮಿ ನಮ್ಮವೇ ? ೧

ಅಡವಿಯೊಳಗಿರ್ಪ ದಿವ್ಯೌಷಧವು ಅನ್ಯವೇ ?
ಪೊಡವಿಯೊಳು ಬೆಳೆವ ಗಿಡಮರವನ್ಯವೇ?
ಜಲಧಿ-ನದಿ ಕೆರೆ ತೊರೆ ಜಲಾಶಯುಗಳನ್ಯವೇ
ಮೃಡನೇತ್ರ ರವಿ-ಶಶಿಗಳನ್ಯವೇ ನಮಗೆ ೨

ಉಪಕಾರಿ ನಮ್ಮವರು, ಅಪಕಾರಿ ಅನ್ಯರು
ವಿಪರೀತವಾಗಿದನು ತಿಳಿಯಬೇಡ
ಉಪಯೋಗದಿಂ ವಸ್ತುವಿನ ಯೋಗ್ಯತೆಯ ತಿಳಿದು
ತಪಯುಕ್ತ ಜೀವನವ ನಡೆಸು ನರನೇ ೩



# ಗಾಂಧೀಜಿ ಚರಮ ಗೀತೆಗಳು

ಕಂದ|| ಭಾರತದೇಶದ ಮಹಿಮಂ |
ಸಾರಗುಣಂ **ಗಾಂಧಿನಾಮ** ಕಾರಣಪುರುಷಂ
ಧಾರಿಣಿಯನುಳಿದು ಜವದಿಂ
ಸಾರಿದನಕಟಕಟ ! ದಿವ್ಯಲೋಕಮನೀಗಳ್ ೧

ಧರೆಯೊಳಹಿಂಸಾತತ್ವಮ |
ನರಿತುಂಮೇಣ್ ಸತ್ಯಶಾಂತಿಧರ್ಮದೊಳಿರುತಂ ||
ಸುರಮುನಿಯಂದದಿ ಶೋಭಿಸಿ |
ಸುರುಚಿರಮತಿ **ಗಾಂಧಿದೇವ**ನೆಸೆದಂ ಜಸದಿಂ ೨

ಮಾನವಧರ್ಮದ ತಿರುಳಂ |
ಜ್ಞಾನಿ **ಶ್ರೀ ಕರಮಚಂದ ತನಯಂ** ತಿಳಿದಂ ||
ಮೌನದಿ ಜನರಂ ತಿದ್ದುತೆ |
ಭಾನುಸಿಭಂ ಕಾಲವಶದಿ ಕಣ್ಮರೆಯಾದಂ ೩

ಶಾ.ವಿ.ವೃ || ಆವಾತಂ ವರಧರ್ಮಸತ್ಯನಿರತಂ ಸತ್ಕೀರ್ತಿ ಸಂಶೋಭಿತಂ |
ಭೂವಿಖ್ಯಾತನಪಾರ ನೀತಿ ನಿಯಮಂ ಸತ್ಯಾಗ್ರಹಾರಾಧಕಂ ||
ಆವಾತಂ ವರಬ್ರಹ್ಮಚರ್ಯನಿರತಂ ಸಂಸಾರಿಯಾಗಿರ್ದೊಡಂ |
ದೇವಂ **ಶ್ರೀ** ಘನಗಾಂಧಿತಾತನನಳಿದಂ ದೌರ್ಭಾಗ್ಯರೀ
ಭಾರತರ್ ೪

ಗಂಧದ ಮರದಾ ತೆರದಿಂ |
**ಗಾಂಧಿಜಿ** ನಿಜ ದೇಶಸೇವೆಗಾಗಿಯೆ ಸವೆದಂ
ತಂದಂ ದೇಶಕೆ ಯಶಮಂ |
ಬಂಧನಮಂ ಬಿಡಿಸಿ ಪೊರೆದನಖಿಲರನೀಗಳ್ ೫

ಹರಿಜನರುನ್ನತಿಗೆಯ್ದಂ
ಹರಿದಂ ಹಿಂದೂಸಮಾಜದತಿ ಮೌಢ್ಯತೆಯಂ ॥
ಹರಿಯವತಾರಂ ಯೆನಿಸುತೆ ।
ಹರಿಗೀತೆಯ ಮುಖದಿ ಲೋಕಶಿಕ್ಷಣಗೆಯ್ದಂ ೬

ಮ.ವಿ. ವೃ॥ ಆಳಿದಂ ಗಾಂಧಿ ಮಹಾತ್ಮನೆಂದು ಮನದೊಳ್ ಶೋಕಿಪ್ಪ
ರೆಲ್ಲಾ ಜನರ್
ತಿಳಿದರ್ ಗಾಂಧಿಗೆ ಮೃತ್ಯುವೆಂತುಟೆನುವರ್ ಆತ್ಮಂಗೆ
ಸಾವಿಲ್ಲಲಾ
ನಳಿನಾಕ್ಷಂ ನರದೇಹದಿಂದ ಧರೆಯೊಳ್ ನಾನಾವತಾರಂಗಳೊಳ್
ತೊಳಲುತ್ತಿರ್ದಪನೆಂದು ಪೇಳ್ವರಸಿಬರ್ ಗೀತಾದಿ ಶಾಸ್ತ್ರಾ
ರ್ಥಮಮ್ ೭

ಜಲದೊಳ್ ಪುಟ್ಟಿದ ಕಮಲಮ್ ।
ಜಲದಂಶವನಂಟಿಯಂಟದಿರ್ಪಾ ತೆರದಿಮ್ ॥
ಇಳೆಯೊಳ್ ಜನಿಸಿದ ಗಾಂಧಿಜಿ ।
ತಿಳಿಯಲ್ ಕಾಮಾದಿಗುಣವಿವರ್ಜಿತನಾದಮ್ ೮

ಕಸ್ತೂರಿಯೊಡನೆ ಗಂಧಂ ।
ವಿಸ್ತರದಿಂ ಕೂಡಿ ಪೇರ್ಮೆಯಾಂತಾಪರಿಯಿಂ ॥
ಕಸ್ತೂರಿದೇವಿಯಿಂ ಸುಜ ।
ನಸ್ತುತ ಗಾಂಧಿದೇವ ಪಡೆದಂ ಜಸಮುಮ್ ೯

ಯುಗಪುರುಷನೆನಿಸಿ ಪೋದಂ ।
ನಗಜಾಧಿಪ ಲೋಕಕೀಗ ಗಾಂಧಿ ಮಹಾತ್ಮಂ ॥
ಜಗದೀ ಬಾಳನು ನೀಗುತೆ ।
ಜಗಜಗಿಸುವ ಮೋಕ್ಷರಾಜ್ಯಮಂ ಘನಮಹಿಮಂ ೧೦

# ಬುದ್ಧನ ಸನ್ನಿಧಿಯಲ್ಲಿ

೧ ಗುರುದೇವಾ! ನಿನ್ನ ದರ್ಶನವು ಕತ್ತಲಲಿ ಮುಂಗಾಣದವರಿಗೆ ದೀಪವ ಕಂಡಂತೆ, ಬಡತನದಿ ಬಳಲಿ ಬೇಸತ್ತವರಿಗೆ ಹಿರಿಯ ಸಿರಿ ಲಭಿಸಿದಂತೆ, ಹಸಿದವರಿಗೆ ಅಮೃತಾನ್ನ ಒದಗಿದಂತೆ, ಆಸೆಯೆಂಬ ಶರಧಿಯೊಳಗೆ ಮುಳುಗಿ ತಾಪತ್ರಯವೆಂಬ ನೆರೆತೊರೆಗಳಿಗೆ ಸಿಕ್ಕಿ ಭ್ರಮಿತನಾದ ಪಾಮರನ ಕೈಹಿಡಿದು ಎತ್ತ ಬಾರದೇ ತಂದೆ ನಿನ್ನ ಕೃಪಾಮಯಮಪ್ಪ ಶಾಂತ ಪ್ರದೇಶಕ್ಕೆ.

೨ ಪತಿತರು, ದೀನರು ಪಾಮರರು, ರೋಗಿಗಳು ಇವರ ಕಿವಿಗಳಿಗೆ ಅಮೃತವೆನಿಸಿದ ನಿನ್ನ ವಿಶ್ವಧರ್ಮದ ಸಾರವನು ಆಜನ್ಮ ಶುದ್ಧರೆಂದುಕೊಂಬ 'ಸರ್ವಂ ಖಲ್ವಿದಂ ಬ್ರಹ್ಮ' 'ಪಂಡಿತಾಸ್ಸಮದರ್ಶಿನಃ' ಎಂಬ ಶಾಸ್ತ್ರದ ನುಡಿಗಳನು ಕಂಠಸ್ಥ ಮಾಡಿರುವ ಪಂಡಿತವಕ್ಕಿಗಳಿಗೆ ಬೋಧಿಸಲಾಗದೇ ಮತ್ತೊಮ್ಮೆ. ಕುಲ, ಜಾತಿ, ಗೋತ್ರ, ಸೂತ್ರಗಳ ಚಲವಿಡಿದು ಹಾಳಾಗುತ್ತಿರುವ ಈ ಜನರ ಕಂಡು ಕಣ್ಣೀರಿಡುವರಲ್ಲವೇ ದಿವ್ಯ ಜ್ಞಾನಿಗಳೆಸಿದ ಆ ಮಹರ್ಷಿಗಳು ?

೩ ಸುವರ್ಣ ಪರ್ಯಂಕದಲ್ಲಿದ್ದ ಮನುತೆಯ ಸೌಂದರ್ಯರಾಶಿಯನು ಅಂತೆಯೇ ನಿನ್ನ ಪ್ರೇಮದ ಮುದ್ದೆ ರಾಹುಲನನು ತೊರೆದು ಲೋಕದ ದುಃಖ ನಿವೃತ್ತಿಗೆ ಕಾರಣವನರಸಿ ಹೊರಟ ನಿನ್ನ ನಿರುಪಮ ವೈರಾಗ್ಯದ ಪ್ರಭೆ ಬೀಳಬಾರದೇಕೆ ? ಎನ್ನೀ ಹಾಳು ಮನಸ್ಸಿಗೆ!

೪ ದಯೆ, ದಾಕ್ಷಿಣ್ಯ, ಶಮೆ, ದಮೆ, ದಾನ, ಧರ್ಮ, ಶಾಂತಿ, ದಾಂತಿ ತ್ಯಾಗ, ಯೋಗ, ಅಭಯ, ಅಹಿಂಸೆ, ಇಂತಪ್ಪ ಸದ್ಗುಣಂಗಳೇ ದೇವಗುಣಗಳಲ್ತೆ! ಅವನುಳ್ಳ ಹೃದಯಮೇ ದೇವಾಲಯಮಲ್ತೆ! ದೇವಲೋಕಮಲ್ತೆ! ಆ ಹೃದಯ ಮಧ್ಯಸ್ಥ ಆತ್ಮನೇ ಸಚ್ಚಿದಾನಂದ ರೂಪನಲ್ತೆ! ಆ ದೇವಂಗಂ ಈ ಜೀವಂಗಂ ಭೇದಮುಂಟೇ ಸುಜ್ಞಾನಿಯಾದವಂಗೆ ?

೫ "ಬುದ್ಧನುಸಿರಿದ ಧರ್ಮದೊಳು ದೇವರೆಂಬ ವ್ಯಕ್ತಿಯಿಲ್ಲ. ಅಕಟಕಟಾ ! ಇಂತಪ್ಪ ನಾಸ್ತಿಕ್ಯಮುಂಟೆ ಪುಣ್ಯಭೂಮಿಯೆನಿಸಿದ ಭಾರತದಲ್ಲಿ"

ಎಂದು ವಿಡಂಬಿಸಿದ ವೈದಿಕರೇ ತಮ್ಮ ನಲ್ಮೆಯಪುರಾಣಂಗಳಲೀ; ಗೌತಮಾ ನಿನ್ನನು ಆ ದಶಾವತಾರಂಗಳಿಗೆ ಗಂಟುಹಾಕಿದ ಪರಿಯೆಂತಯ್ಯಾ, ಈ ನಿನ್ನ ಧರ್ಮದ ಮಾಯೆಯನು ತಿಳಿಯದೆ ನಾನು ಮೂಕನಾದೆನಯ್ಯಾ. ಇದರ ಅಂತಸ್ಥವನರುಹಿ ಪೊರೆಯಯ್ಯಾ ಜ್ಞಾನಾರ್ಥಿಯಾದೆನ್ನನು ಓ ವಿಶ್ವ ಬಂಧುವೇ.

೬ ಹಿಂದೂಧರ್ಮದೊಳಿದ್ದ ಕುಂದನಪಹರಿಸಿತು ಬೌದ್ಧಮತವೆಂದು ವಿವೇಕಾನಂದರೊಮ್ಮೆ ಪೇಳಿದರಲ್ತೆ, ಅದನಾದರೂ ಗ್ರಹಿಸಬಾರದೇ ನಮ್ಮ ವೇದ ಪುತ್ರರು. 'ಆತ್ಮಗಳಲಿ ಪುಂ ಸ್ತ್ರೀ ಭೇದವನರಿಯುವ ಈ ಬೃಹಸ್ಪತಿಗಳ ಕಂಡು ಗೀತೆ ಶೋಕಿಪುದಲ್ತೇ! ಉಪನಿಷತ್ತು ಉಪವಾಸ ಮಾಳ್ಪುದಲ್ತೇ! ಶರಣರು ಮರುಗವರಲ್ತೆ! ಶಿವ ಶಿವಾ! ಏನೆಂಬೆನೀ ಕೌತುಕವ ಬುದ್ಧದೇವಾ.

—:★:—

## ಯದುರಾಜ

ಕಂದ॥ ಯಾದವ ವಂಶದೆ ಹರಿಗೆಣೆ ।
ಯಾದವ ನೆನಿಸುತ್ತ ಯದು ಮಹಾಭೂಪಾಲಂ ॥
ಆದಿಯೊಳಾಳಿದ ನಿಳೆಯಂ ।
ಮೇದಿನಿಯೊಳ್ ಬಣ್ಣಿಸಲ್ಕೆ ಜಾಣನದಾವಂ ೧

ಭಾಸುರನಾ ಯದುರಾಜಂ ।
ಮೈಸೂರಂ ತನ್ನ ಬಾಹುಬಲದಿಂ ಗೆಲ್ದಂ ।
ಲೇಸಿಂದಾಳುತ ಮಿರ್ದಂ ।
ವಾಸವನಂ ಪಳಿವ ವಿಪುಲ ಸಂಪದದಿಂದಮ್ ೨

ಚಂದಿರನ ವಂಶಸಂಭವ
ನಿಂದಿರನಂ ಜರಿವತೆರದೆ ಬಾಳಿದನಾಗಳ್ ॥
ವಂದಿತ ಚಾಮುಂಡಾಂಬೆಯ ।
ಬಂಧುರ ಕೃಪೆಯಿಂದ ರಾಜಕುಲ ಸಂದೀಪಂ ೩

# ಜಗದೀಶಚಂದ್ರ ಬೋಸ್

ಭಾರತದ ಕೀರ್ತಿಯನು ಜಗಕೆಲ್ಲ ಹಬ್ಬಿಸಿದ
ಧೀರ ಜಗದೀಶ ನೀಂ ಮರೆಯಾದೆಯಾ !!
ಸಾರತರವೆನಿಪ ವರ ಮೋಕ್ಷ ಸಾಮ್ರಾಜ್ಯಮಂ
ಸೇರಲಾತುರದಿಂದ ಪಯಣಮಾಡಿದೆಯಾ ೧

ಉಪನಿಷತ್ತಿನೊಳಿರ್ದ ವೇದಾಂತ ತತ್ವಮಂ
ವಿಪರೀತವೆಂದು ಕೆಲರಾಡುತಿರಲು
ತಪಸಿಗಳ ನುಡಿಯನೃತವಲ್ಲೆಂಬುದನು ನೀನು
ಸುಪಥ ವೈಜ್ಞಾನಿಕನೆ ತೋರಿರ್ಪೆಯಯ್ ೨

ತರುಗಳಿಗೆ ಸುಖದುಃಖಮುಂಟೆಂದು ತೋರಿಸಿದೆ
ಪರಮ ಋಷಿಗಳ ನುಡಿಯು ಸತ್ಯವೆನಿಸಿದೆ ನೀಂ
ಪರಿಪರಿಯ ವಿಧದಿಂದ ಪಾಶ್ಚಾತ್ಯರೆಲ್ಲರನು
ಧರಣಿಯೊಳಗಾಶ್ಚರ್ಯ ಶರಧಿಗುರುಳಿಸಿದೆ ೩

ಗಳಿಸಿದ್ದೈಶ್ವರ್ಯವೆಲ್ಲವನು ಧಾರೆಯನೆರೆದೆ
ತಿಳಿದು ಜೀವಿತವು ಅಸ್ಥಿರವದೆಂಬುದನು ನೀಂ
ಅಳಿಯದಿಹ ಕೀರ್ತಿಯಿಂ ದೇಶಬಂಧುವಿನಂತೆ
ಇಳೆಯೊಳ್ ವಿರಾಜಿಸುವೆ ಜಗದೀಶಚಂದ್ರ ೪

ನರಗಾಂಧಿ ಠಾಗೂರ ಜಗದೀಶಚಂದ್ರ ಮೋಜ್
ಸರಸ ರಾಮನ್ ಸುರಾಧಾಕೃಷ್ಣರಂ
ಪರಮ ಋಷಿಗಳ ವಂಶಕೀರ್ತಿ ಸ್ತಂಭಗಳೆಂದು
ಕರೆವರೀ ಜಗದ ಸಜ್ಜನರು ಸಂತಸದಿ ೫

ಭೌತಿಕದ ದೇಹವದು ಮರೆಯಾಯ್ತು ಲೋಕದೊಳ್
ಖ್ಯಾತಿವಂತನೆ ನಿನ್ನ ಕೀರ್ತಿ ತನುವಿಹುದು
ಆತುಮಕೆ ಚಿರಶಾಂತಿ ಲಭಿಸಲಯ್ ನಿನಗೆ ಆ
ಪ್ರೀತಿಮಯ ಪರಮೇಶನಡಿಗಳೊಳಗನಿಶಂ ೬

# ಮಿಂಚುವೆಣ್ಣು

೧. ಎಲೆಗೆ ಮಿಂಚಿನಂತೆ ಹೊಳೆಯುವ ಇಂಚರದ ಸಂಚುಗಾರ್ತಿ ಹೊಳೆಯುವ ಹೆಣ್ಣೆ, ಎನ್ನನೇಕಿಂತು ಕಾಡುವೆ? ಒಮ್ಮೊಮ್ಮೆ ಎನ್ನನೇಕಿಂತು ಉಪೇಕ್ಷಿಸುವೆ? ಇನ್ನೊಮ್ಮೆ ಎನ್ನನೇಕಿಂತು ಒಲಿಸುವೆ? ನಲಿಸುವೆ? ಬಡಬಾಳುವೆಯ ಎನ್ನ ಮುರುಕು ಮನೆಯಲಿ ನಿನ್ನಂತಹ ಅರಸುಗುವರಿಗೆ ಚಿರಕಾಲ ಬಾಳಲು ಸಾಧ್ಯವೆಂತಪ್ಪುದೌ ? ಮಿಂಚಿನ ಹೆಣ್ಣೆ, ಹೊಳೆಯುವ ಹೆಣ್ಣೆ, ಚಂಚಲ ಕನ್ಯೆ ಎನ್ನೊಡೆಯ ಚಿದ್ಘನಲಿಂಗಸೋಮೇಶನ ಕರುಣೆಯಿಂದಾನು ಶಾಂತಿಯನನುಭವಿಸುವಪ್ಪ ಕಾಲದೊಳು ನಾನು ನಿನ್ನೊಡನೆ ಒಲಿಯುವೆನು, ನಲಿಯುವೆನು, ಕುಣಿಯುವೆನು, ತಣಿಯುವೆನು.

೨. ಜೀವನದ ಬಗೆಬಗೆಯ ದಂದುಗದೊಳು ಸಿಲುಕಿ 'ಕೆಂಡದೊಳು ಬಿದ್ದ ಅವರೆಯ ಹುಳುವಿನಂತೆ' ತನ್ನ ಸ್ನೇಹದಿಂದಲೇ ನಿರ್ಮಿತವಾದ ಸೆರೆಯೊಳು ಸಿಲುಕಿದ ತೆರಣಿಯಹುಳುವಿನಂತೆ ಅನಿಚ್ಛಾಪ್ರಾಲಬ್ಧದಿಂದ ಬೆಳಗಾದರೇನೋ? ಎಂತೋ? ಎಂಬ ಚಿಂತೆಗೊಳಗಾದ ಪ್ರತಿಕೂಲದೈವಿಯಾದೆನ್ನನೇಕಿಂತು ಬಳಲಿಸುವೆ ? ನಿನ್ನ ಕಡೆಗಣ್ಣೋಟದ ಪರಿಣಾಮವು ಲೋಕೋನ್ನತಿಗೆ, ಎಮ್ಮ ಸಾಹಿತ್ಯ ಸಂಸ್ಕೃತಿಗಳ ಏಳಿಗೆಗೆ ಸಹಾಯ ಮಾಪ್ಪುದೆಂಬುದು ದಿಟ. ಆದರೆ ಅಂತಪ್ಪ ಜಪವಪಡೆಯುವ ಯೋಗ ಈ ಎನ್ನ ಘಟಕ್ಕಿಲ್ಲವೆಂದು ಅರಿದಿಪ್ಪೆನೌ ಎಮ್ಮ ಶರಣರ ಕೃಪಾ ಬಲದಿಂದ. ಅದು ಕಾರಣ ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರನ ಕೃಪಾಮಯ ಪ್ರಕಾಶವಿಲ್ಲದ ಎನ್ನ ಅಂಧಕಾರಮಯ ಒಡಲಿನಲ್ಲಿ ಹೊಳೆಯುವ ಹೆಣ್ಣೆ, ಮಿಂಚಿನ ಕನ್ಯೆ, ಪ್ರತಿಭಾಂಗನೆ ನೀನಿರಬೇಡ ಹೋಗೌ. ನಿನಗನುಕೂಲನಪ್ಪ ನಾಥನ ಸುದ್ದಿಯ ನರಸು ಹೋಗೌ! ಸುಮ್ಮನೇಕೆ ಕಾಡುವೆ ಈ ಬಡಜೀವಿಯ!

೩. ಕ್ಷಣಕೊಂದು, ಘಳಿಗೆಗೊಂದು, ಮುಹೂರ್ತಕೊಂದು, ದಿನಕೊಂದು ಹೊಸ ಹೊಸ ಯೋಚನೆ ಮೇಣು ಯೋಜನೆ ತಲೆದೋರುವುದೆನ್ನೊಳು. ಹೊಳೆಯುವ ಹೆಣ್ಣೆ, ಪ್ರತಿಭಾಂಗನೆ ನಿನ್ನ ಕರುಣೆಯಿಂದ. ಆದರಿಂತಪ್ಪ ಯೋಚನೆ

ಯ ಕೈಗೂಡಿಸುವ ದಿವ್ಯಶಕ್ತಿ, ಸಂಪತ್ತಿನ ಶಕ್ತಿ, ಅಧಿಕಾರ ಶಕ್ತಿ ಇಲ್ಲದ ಎನ್ನೊಳುದಿಸಿದರೆ; ಸುಂದರ ಸ್ತ್ರೀ ರತ್ನವು ಅಪಾತ್ರನಸೇರಿದಂತೆ ಆದುದಾ. ಪ್ರತಿಭಾಂಗನಾ ನಿನ್ನನುಗ್ರಹದಿಂದಾದ ಬಗೆಬಗೆಯ ಯೋಚನೆಗಳು ಎನ್ನ ಜೀವನದೊಳು ನಿಷ್ಫಲವಾದುವಾ ಎನ್ನೊಡೆಯ ಚಿದ್ಘನಲಿಂಗ ಸೋಮೇಶನ ದಯೆಯಿಲ್ಲದ ಕಾರಣ.

೪. "ಪಡೆದಷ್ಟಲ್ಲದೆ ಬಪ್ಪುದೆ" ಎಂಬ ಎಮ್ಮ ಕಬ್ಬಿಗನೊಬ್ಬನ ನುಡಿಯಂತೆ, "ಅವಶ್ಯಮನುಭೋಕ್ತವ್ಯಂ" ಎಂಬ ಸಕ್ಕದದ ಒಕ್ಕಣೆಯಂತೆ ಆಗುಹೋಗುಗಳು ಕರ್ಮಾಧೀನವೆಂದರಿತ ನಾನು ನಿಷ್ಪ್ರಭನಾದೆನವ್ವಾ. ಪ್ರಾಚೀನ ಕರ್ಮವ ಮೀರಲಾರೆನವ್ವಾ? ಅದು ಕಾರಣ ನವಮಲ್ಲಿಕಾಮಾಲೆಯು ಒಣಗಿದ ಮರವ ನಾಲಂಗಿಸಿದಂತೆ ನೀನೆನ್ನ ಆಶ್ರಯಿಸಬೇಡ ಹೋಗವ್ವಾ ನಿನಗನುರೂಪನಪ್ಪ ಸುಕುಮಾರನ ಹುಡುಕಿಕೊಂಡು ಮಿಂಚಿನಹೆಣ್ಣೆ, ಚಂಚಲ ಬಾಲೆ, ಇಂಚರದ ಸುಂದರಿ, ಪೂಜ್ಯ ಪ್ರತಿಭಾಂಗನೆ ನೀನೆನ್ನ ಬಳಲಿಸಬೇಡ ಹೋಗವ್ವಾ ಎನ್ನೊಡೆಯ ಚಿದ್ಘನಲಿಂಗ ಸೋಮೇಶನ ಕರುಣೆಗೆ ಪಾತ್ರನಾಗದ ಬಾಹಿರನ.



# ದೇಶಬಂಧು ದಾಸ್

ಕಂದ ॥ ಭಾರತ ಮಾತೆಯ ಪುತ್ರಂ ।
ವೀರಶ್ರೀಮಿತ್ರನಮಿತಸದ್ಗುಣಪಾತ್ರಂ ॥
ಸಾರಮತಿ ಚಿತ್ತರಂಜನ ।
ಸೇರಿದ ನಕಟಕಟ ! ಸಗ್ಗಕೀಗಳ್ ಹಾ ! ಹಾ ! ೧

ಎಲೆ ದಾಸ ದೇಶಬಂಧುವೆ ।
ನೆಲದೊಳ್ ನೀನಳಿದುಪೋದ ಬಳಿಕಿನ್ನಾರಯ್ ॥
ಬಲವಂತರಾದ ಹಗೆಗಳ ।
ಚಲಮಂ ಮಾರಾಂತು ನಿಂತು ನಯಪಥಕೆಳೆವರ್ ೨

ಶೂರಂ ಧೀರಂ ಘನ ಗಂ ।
ಭೀರಂ ಪ್ರತಿಭಟಪ ನಿಖಿಲ ಕುಜನ ವಿದಾರಂ ॥
ಸಾರ ಬಳವಂತನತುಳಂ ।
ದೂರೀಕೃತಸಕಲದೋಷ ದಾಸಂ ಪೋದಂ ೩

ಅಕ್ಕಟ ವಿಧಿ ಪಾಪಿಷ್ಟಂ ।
ಮಕ್ಕಳ ಸುಖದುಃಖಮಿನಿತು ನೋಡದೆ ಪೊಯ್ವಂ ॥
ಅಕ್ಕರಿಪವರಪಿತರ್ಗಳ ।
ಲೆಕ್ಕಿಸದೆಳ್ಳನಿತುಮವರ ದಿವಕಂ ಬೇಗಂ ೪

ನಿನ್ನಯ ವಾಕ್ಚತುರತೆಯುಂ ।
ಸನ್ನುತ ಮತಿವಂತ ನಿನ್ನ ಸುಕವಿತ್ವಂ ಮೇಣ್ ॥
ಚೆನ್ನಿನಿಪ ನಯಜ್ಞತೆಯುಂ ।
ನಿನ್ನುಳಿದಿನ್ನಾರ್ಗೆ ಬರ್ಪುದವನೀತಳದೊಳ್ ೫

ಅರವಿಂದಘೋಷ ಯತಿಪನ ।
ಗುರುತರಮೆನಿಸಿರ್ದ 'ಬಾಂಬು ಕೇಸಂ' ಗೆಲ್ದಾ ॥
ಸುರುಚಿರ ಮತಿಯುತನೆನಿಸಿದ ।
ಸರಿದೊರೆಯಿಲ್ಲೆನಿಪ ದಾಸನುಳಿದಂ ನಮ್ಮಂ ೬

ತನುಸುಖಮಿನಿತಿಲ್ಲದೆ ನಿಜ ।
ಜನಸೇವೆಯೆ ಮುಖ್ಯವೆಂದು ಭಾವಿಸಿ ಮನದೊಳ್ ॥
ತನು-ಮನ-ಧನವೆಲ್ಲದರಿಂ ।
ಘನಸೇವೆಯನೆಸಗಿ ಪೋದ ದಾಸನೆ ಧನ್ಯಂ ೭

ಹಾ ದಾಸನೆ ಗುಣಕೋಶನೆ ।
ಹಾ ದಾಸನೆ! ಭಾರತೀಯ ಕೀರ್ತ್ಯಾಸ್ಪದನೇ ॥
ಪೋದೆಯ ಭವನಾಶನೆ ನಿಜ ।
ವೀಧಿಯ ಸರಿಮಾಡಿಕೊಂಡು ಪರಶಿವನೆಡೆಗಂ ೮

ಭಾರತಜನಗಳ್ಗನಿಶಂ ।
ಕ್ರೂರರ್ ತಾವೆಸೆಪ ನೀಚಕೃತ್ಯಮನರುಹಲ್ ॥
ಮಾರಾರಿಯೆಡೆಗೆ ಪೋದೆಯ ।
ದೂರೀಕೃತತಾಪಬೃಂದ ಸದ್ಗುಣವೃಂದಾ ೯

ನಿರುಪಮಮೆನಿಸಿದ ಧೈರಂ ।
ಸರಿಸಮನಿಲ್ಲೆನಿಪ ನಿನ್ನ ಮಹದೌದಾರ್ಯಂ ॥
ದೊರೆಗಾಣದ ನಿಜಸ್ಥೈರ್ಯಂ ।
ಧರೆಯೊಳ್ನಿನಗುಚಿತಮದು ಸೀ. ಆರ್. ದಾಸಾ ೧೦

ನಿನ್ನಂ ನಂಬಿದ ಕಾಂಗ್ರೆಸ್ ।
ಸನ್ನುತ ತರು ಬಾಡಿಪೋಯ್ತು ನೀ ಪೋದುದರಿಂ ॥
ಖಿನ್ನತೆವೆರಸಿದರಖಿಳರ್ ।
ಬನ್ನಂ ತಾನೊದಗಿತೆಂದು ನಿನ್ನುಂ ಮುನ್ನುಂ ೧೧

ಫಲವಂ ಪಂಬಲಿಸಿನ್ನೇಂ ।
ಬಲವತಂ ದಾಸಬಂಧುವಳಿದ ಬಳಿಕ್ಕಂ ॥
ಬಲಗೆಯ್ ಪೋದಂತಾದುದು ।
ತಿಳಿಯಲ್ ದೇವಾತ್ಮ ಗಾಂಧಿಗೀಗಳ್ ಧರೆಯೊಳ್ ೧೨

ಆರಾದೊಡಮೇನಿಳೆಯೊಳ್ ।
ಮಿಾರಲ್ಕಾನಹುದೆ ವಿಧಿಯ ದುರ್ಲಿಪಿಯಂ ತಾಂ ॥
ಸೇರಲ್ವೇಳ್ಕುಮದೆಲ್ಲರ್ ।
ಮಿಾರಿದ ಮೃತ್ಯುವಿನ ದಂಷ್ಟ್ರದೆಡೆಗಂ ಕಡೆಗಂ ೧೩

ತಿಳಕನ ಮೇಣ್ ಗೋಖಳೆಯಂ ।
ಕಳಕೊಂಡಳುತಿರ್ಪ ಭಾರತಾಂಗನೆಯಿಾಗಳ್ ॥
ತಳಮಳಗೊಳ್ವಳ್ ನಿನ್ನಂ ।
ಕಳೆದೆಂತಿಳೆಯಲ್ಲಿ ಬಾಳಲಾರ್ಪೆನೆನುತ್ತಂ ! ೧೪

ಪೋದೆಯ ಭಾರತ ಬಂಧುವೆ ।
ಪೋದೆಯ ಲಾವಣ್ಯರಸದ ಸಿಂಧುವೆ ವಿಭುವೇ ॥
ಪೋದೆಯ ಕಾಂಗ್ರೆಸ್ ಪ್ರಭುವೆ ।
ಮೇದಿನಿಯೊಳ್ ತೊರೆದು ಎಮ್ಮನೆಲ್ಲರ ದಿವಕಂ ೧೫

ತನಗಿರ್ದುದೆಲ್ಲವಂ ನಿಜ ।
ಜನಪದ ಕಿನಿತಿಲ್ಲದಂತೆ ದಾನವಗೆಯ್ದಾ ॥
ನಿನಗುಚಿತಮಪ್ಪುದೀಗಳ್ ।
ಘನವಾದಭಿನವಸುಕರ್ಣನೆಂಬಾ ನಾಮಮನ್ ೧೬

ಸತ್ತುದು ಭೌತಿಕದೇಹಂ ।
ಮತ್ತುಳಿದುದು ಕೀರ್ತಿದೇಹಮಿಾ ಧಾರಿಣಿಯೊಳ್ ॥
ಗೊತ್ತಾದುದಿದರ ವಿವರಂ ।
ಚಿತ್ತದಿ ಮತ್ತಿದಕೆ ಚಿಂತಿಸಿನ್ನೇಂ ಫಲವಯ್ ೧೭

# ಕೀರ್ತಿಕಾಮಿನಿ

ಕಾಮಿನೀ ಕಾಂಚನದ ಆಶೆ ಲೋಗರನು ನರಕಕಿಳಿಪುದೆಂದು ಆದ್ಯರು ಹೇಳಿರ್ಪರಯ್ಯಾ. ಎನಗೆ ಕಾಮಿನಿಯೂ ಬೇಡ, ಕಾಂಚನವೂ ಬೇಡ ಎಂದು ಸುಮ್ಮನಿರ್ದೆನಯ್ಯಾ. ಇವೆರಡಕ್ಕೂ ಮಿಗಿಲಾದ ಕೀರ್ತಿಕಾಮಿನಿ ಎನಗೆ ಹುಚ್ಚು ಹಿಡಿಸಿದಳಯ್ಯಾ. ಅವಳ ಬೆನ್ನು ಹಿಡಿದು ನಾನು ಮುಂದುಗಾಣದಾದೆನಯ್ಯಾ. ಆದ್ಯಂತರಹಿತ ದಂದುಗಕೆ ಎದೆಗೊಟ್ಟೆನಯ್ಯಾ. ಮರೀಚಿಯನರಸಿದ ಪಶುವಿನಂತಾದೆನಯ್ಯಾ. ಎನಗೆ, ಈ ಕೀರ್ತಿ ಕಾಮಿನಿಯ ಹುಚ್ಚು ತೊಲಗಿಸಿ ಕಾಯಯ್ಯಾ! ಕಾಯಯ್ಯಾ! ಶಿವಧೋ! ಶಿವಧೋ! ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

ಕೀರ್ತಿಕಾಮಿನಿಯು ಮೋಹಿಸಿದ ಆವನೂ ಸುಖಿಸಲಿಲ್ಲವಯ್ಯಾ ಜಗದೊಳು. ಇವಳ ಪರಿ ಬೆಲೆವೆಣ್ಣಿಗಿಂತ ಕರಕಷ್ಟಕಾಣಯ್ಯಾ. ಬೆಲೆವೆಣ್ಣು ಜನ್ಮವೊಂದ ಕೆಡಿಸಿದರೆ ಈ ಹುಚ್ಚು ಹೆಣ್ಣು ಜನ್ಮಜನ್ಮಾಂತರವ ಕೆಡಿಸುವಳಯ್ಯಾ. ಇಂತಪ್ಪ ಕಾಮಿನಿಯ ಭ್ರಾಂತಿಯ ತೊಲಗಿಸಿ ಎನಗೆ ಶಾಂತಿ ಸುಖವ ನೀಡಯ್ಯಾ. ಲೋಕದ ಕಳವಳವ ಪರಿಸಯ್ಯಾ ಶಿವಧೋ! ಶಿವಧೋ! ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

ಕಾಮಿನಿಯೂ ಅಲ್ಲದೆ ಕಾಂಚನವೂ ಅಲ್ಲದ ಈ 'ಕೀರ್ತಿ ಶನಿ' ಎನ್ನನದೆಂತು ಕಾಡುತಿಪ್ಪುದಯ್ಯಾ? "ಪುಣ್ಯೈರ್ಯಶೋಲಭ್ಯತೇ" ಎಂಬ ಹಿರಿಯರ ನುಡಿಯ ಅಂತರಂಗವೇನಯ್ಯಾ? ಪುಣ್ಯಾತ್ಮರಲ್ಲದ ಹಲವರು ಯಶೋವಂತರಾಗುವುದೆಂತಯ್ಯಾ? ಪುಣ್ಯಾತ್ಮರೆನಿಪ ಕೆಲನರು ಯಶವಿಲ್ಲದೆ ಅಳಿದುದೇಕಯ್ಯಾ? ಈ ಕೀರ್ತಿಕಾಮಿನಿಯ ಅಂತರಂಗವನರಿದ ಜಾಣರಾರಯ್ಯಾ? ಎನಗೀ ದುಷ್ಟತರುಣಿಯ ಸಂಗವನು ಪರಹರಿಸಿ ಉದ್ಧರಿಸು ಶಿವಧೋ! ಶಿವಧೋ! ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

ಲೋಕದ ಪರಿ ವಿಚಿತ್ರ ಕಾಣಯ್ಯಾ. ಕಷ್ಟಪಟ್ಟು ಕೀರ್ತಿಯರಿಯದರು ಕೆಲವರು. ಕಷ್ಟವಿಲ್ಲದೆ ಕೀರ್ತಿಯಗಳಿಸುವರು ಕೆಲವರು. ಲೋಕದೊಳು ಈ

ವಿಚಿತ್ರಯೋಗದ ವ್ಯಾಪಾರವೇನಯ್ಯಾ ? ಕೀರ್ತಿಕಾಮಿನಿಯ ಈ ಕುಟಿಲತೆಯ ನಾನೆಂತು ಬಣ್ಣಿಸಲಯ್ಯಾ ? ಈ ಚಪಲೆಯ ಬೆಂಬಿಡಿದು ನಾ ಮತಿಗೆಟ್ಟೆ–ಪಥ ಗೆಟ್ಟೆ ಕಾಣಯ್ಯಾ. ಎನಗೀ ಹುಚ್ಚುಯಶದ ಭ್ರಾಂತಿಯ ತೊಲಗಿಸಯ್ಯಾ ಕರುಣೆ ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

—:★:—

## ಡಾ|| ಸರ್ ಮಿರ್ಜಾ ಎಂ. ಇಸ್ಮಾಯಿಲ್

ಕಂದ|| ಭಾರತ ಮಾತೆಯ ಪುತ್ರನ್ |
ಧೀರಂ ಮೈಸೂರು ದೇಶದೊಳ್ ವಿಖ್ಯಾತನ್ ||
ಸಾರಗುಣ ವಿನಯಶೀಲನ್ |
ವೀರೋತ್ತಮ ಮಿರ್ಜಮಂತ್ರಿ ಬುಧಜನವಂದ್ಯಂ ೧

ವೃ|| ಆವಾತಂ ವರಕೃಷ್ಣರಾಜನೃಪನಿಂ ಸನ್ಮಾನ್ಯನಾಗಿರ್ಪನೋ |
ದೇವಾತ್ಮಂ ಗುರುಗಾಂಧಿ ತಾತನೆಡೆಯೊಳ್ ಸಚ್ಛಿಷ್ಯನಾಗಿರ್ಪನೋ ||
ಆವಾತಂ ಘನಶಾಂತಿದಾಂತಿಗುಣದಿಂ ಸಂಶೋಭಿಸುತ್ತಿರ್ಪನೋ |
ಭೂವಿಖ್ಯಾತನವಂ ಮಹಾಮತಿಯುತಂ ಸರ್ ಮಿರ್ಜಮಂತ್ರೀಶ್ವರಂ ೨

ಕಂ|| ಧೈರ್ಯದಿ ಬಾಬರನಂ ಪೋಲ್ |
ಸ್ಥೈರ್ಯದೊಳಕ್ಬರನ ಗುಣವ ಪೋಲುತ್ತಂ ಸಾಂ ||
ದರ್ಯದಿ ಷಾಹಜಿಹಾನಂ |
ಸರ್ವೋತ್ತಮ ಮಿರ್ಜಮಂತ್ರಿ ಜಸದಿಂದೆಸೆವನ್ ೩

# ತಾಯಿ-ಮಗು

ಒಂಭತ್ತು ತಿಂಗಳಾನಿಂಬುಗೊಟ್ಟೀ ದಿನವೆ ।
ತುಂಬು ನೋವನು ತಿಂದು ಹಡೆದೆ ಮಗುವೆ ।
ಕುಂಭಿಣಿಯೊಳೀಗಲೇ ಕೇಳಿದೆನು ಕಿವಿತುಂಬ ।
ಅಂಬ ಅಂಬಾ, ಎಂಬ ! ಸವಿದನಿಯನು ೧

ಮುಂಜಾನೆ ಜನುಮಿಸಿದೆ ಸಂಜೆ ನಲಿದಾಡಿದೆ ।
ಬಂಜೆತನ ಹೋಯ್ತೆಂದು ಕುಣಿದೆ ನಾನು ।
ಮಂಜು ಮುಚ್ಚಿದತೆರದಿ ಕತ್ತಲೆಯು ಕವಿದೊಡನೆ ।
ಅಂಜುತಮ್ಮಾ ! ಎಂದು ಕಣ್ಮುಚ್ಚಿದೆ ೨

ಪಟ್ಟಶ್ರಮಕಿದುಫಲವೆ ? ಸೃಷ್ಟಿಯೊಳಗಿದು ಘನವೆ ।
ಸೃಷ್ಟಿಗೀಶನೆ ಏನು ನಿನ್ನಮಾಯೆ ?
ಹಗಲುನೋಡಿದ ಮಗುವನಿರಳು ಕಣ್ಮರೆಗೆಯ್ದೆ ।
ಜಗದೊಳೆನ್ನಯಬಾಳ ಬರಿದುಗೆಯ್ದೆ ೩

ಸತ್ತು ಹೋಗಿಹೆ ನೀನು ಎತ್ತ ಹೋಗಲಿ ನಾನು ।
ಅತ್ತು ಕಣ್ಣೆಲ್ಲ ಮಂಜಾಯ್ತು ಮಗುವೆ?
ಎತ್ತು ಆಡಿಸುವಾಸೆ ಕನಸಾಯ್ತು ನನಗಿಂದು ।
ಮೃತ್ಯುವಿನ ಕೈಗೊಂಬೆಯಾದೆ ನೀನು ೪

ಬಹುದಿನದ ಬಯಕೆಯದು ಕೈಗೂಡಿತೆಂದಿರ್ದೆ ।
ಅಹಹ ! ತಾಯ್ತನ ಬಂದಿತೆಂದಿರ್ದೆನು ।
ಮೋಸಮಾಡಿತು ವಿಧಿಯು ಘಾಸಿಯಾಯಿತು ಜನುಮ ।
ದೇಸಿಗಳು ನಾನಾದೆ ಶಿವನೆ! ಭವನೆ! ೫

# ಅನುಭಾವಿ

೧. ಜಟೆಯು ಬಳೆಸಿದಾತ ಅನುಭಾವಿಯೋ? ಭೂತಿಯ ಪೂಸಿದಾತ ಅನುಭಾವಿಯೋ? ಮಣಿಯ ಧರಿಸಿದಾತ ಅನುಭಾವಿಯೋ? ಕಾವಿಯನು ಅಲಂಕರಿಸಿದಾತ ಅನುಭಾವಿಯೋ? ಊಕುಳವ ಹಿಡಿದಾತ ಅನುಭಾವಿಯೋ? ವೇಷಭೂಷಣವ ತಳೆದಾತ ಅನುಭಾವಿಯೋ ಹೇಳಾ? ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

೧. ಕತ್ತೆ ಬೂದಿಯು ಪೂಸಿದರೆ ಅನುಭಾವಿಯಪ್ಪುದೆ? ಶುನಕ ಮಣಿಮಾಲೆಯ ಧರಿಸಲು ಅನುಭಾವಿಯಪ್ಪುದೆ? ಕಾವಿಯನಲಂಕರಿಸಿದ ನಾಟಕದ ನಟ ಅನುಭಾವಿಯೇ? ಜಟೆಯು ಬಳೆಸಿದ ಅಲಸಿಗ ಅನುಭಾವಿಯೇ? ಇಂತಪ್ಪವರು ಅನುಭಾವಿಗಳಾದರೆ ದುಃಖದೂರ ನಿಜಾನುಭಾವಿ ಯಾರೆಂಬುದ ಹೇಳಾ? ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

೩. ಭಕ್ತನಾಗಿ ಶರಣರ ಕಂಡು ಶರಣು ಶರಣೆನ್ನದವ ಅನುಭಾವಿಯೆ? ಗುರುಜಂಗಮರ ಕಂಡು ಪೊಡವಡಲಾರದವ ಅನುಭಾವಿಯೆ? ತೀರ್ಥಪ್ರಸಾದವ ಸಂಶಯಿಪಾತ ಅನುಭಾವಿಯೆ? ಶರಣರ ಸೂಳ್ನುಡಿಯನಾಲಿಸಿ ಪಾಲಿಸದವ ಅನುಭಾವಿಯೆ? ಶಿವಕೃಪೆಗೆ ದೂರಾದವ ಅನುಭಾವಿಯೆ ಹೇಳಾ? ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

೪. ಅಂತರಂಗವ ಜಯಿಸಿ ಬಹಿರಂಗವ ಸೋಸಿ ಕಾಮಕ್ರೋಧವ ಗೆದ್ದು ಅಷ್ಟಮದಗಳ ಒದ್ದು ಸ್ರಕ್‌ಚಂದನ ವನಿತಾದಿಗಳನುಳಿದು ದುರ್ಗುಣ ದುರಾಚಾರಗಳ ಕಳೆದು ಅಹಂಕಾರ ಮಮಕಾರಗಳ ವರ್ಜಿಸಿ ಪರಿಶುದ್ಧನಾದ ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರನ ಶರಣನೊಬ್ಬಾತನೇ ಅನುಭಾವಿಯು. ಇಂತಪ್ಪ ನಡೆನುಡಿಯಿಲ್ಲದ ನರರ ಅನುಭಾವಿಯೆಂದು ಪೇಳಲೆಂತಪ್ಪುದೋ ಹಾಳು ಬಾವಿಯಂತಿರ್ಪ ನಿರರ್ಥಕರ?

# ಶರಾವತೀ ಜಲಪಾತ

ಕಂದ॥ ಭೂಮಿಜೆ ತೃಷೆಯಿಂ ಬಳಲ್ದಿರೆ ।
ರಾಮಂ ನಿಜಶರದ ಮುಖದಿ ಕೊರೆಯಲ್ ಧರೆಯಂ ॥
ಭೂಮಿಯೊಳುದಿಸಿತ್ತೀನದಿ ।
ರಾಮಾಜ್ಞೆಯೊಳಾದುದೀ ಶರಾವತಿಯಲ್ತೇ ॥ ೧

ಅಂತುದ್ಭವಿಸದೆಯಿರೆ ತಾ ।
ನಿಂತೀತಕೆ ಪರಿವಳೆಯ್ ಶರಾವತಿ ಭರದಿಂ ॥
ಸ್ವಾಂತದೆ ಭಾವನೆಗೆಯ್ದುಳೊ ।
ಕಾಂತೆ ಶ್ರೀರಾಮ ಬಾಣದಂದದಿ ಪರಿಯಲ್ ॥ ೨

ವೃ॥ ನಡುಗಾಡೊಳ್ಕಡುಸೊಂಪಿನಿಂದೆ ಪರಿವಳ್ ವೈಯ್ಯಾರಮಂ ಬೀರುವಳ್ ।
ನುಡಿವಳ್ತನ್ನಯದೊಂದುರೀತಿ ರವದೊಳ್ ಪೌರೇಂದ್ರರಂ ಪರ್ಷಿಪಳ್ ॥
ಕಡುತಾಪಂ ಬಡೆದಿರ್ದ ಪಾಂಥ ಜನರಂ ನೀರಿಂದೆ ಸಂತೈಸುವಳ್ ।
ನುಡಿಯಲ್ಕಾರಿಳೆಯಲ್ಲಿ ಶಕ್ತರಿವಳೀ ಭಾವಂಗಳಂ ಬಣ್ಣಿಸಲ್ ॥ ೩

ಕಂದ॥ ಕಡುಡೊಂಕು ಮಾರ್ಗಮೀಕೆಗೆ ।
ನಡೆ ನೋಡಲ್ ಸರಳಭಾವದಿಂ ಶೋಭಿಸುಗುಂ ॥
ಜಡಭರಿತೆಯಾದೊಡಂ ತಾವ್ ।
ಕುಡುವಳ್ಗಡ ತನ್ನನರ್ಥಿಪರ್ಗೀಪ್ಸಿತಮಂ ॥ ೪

ಜುಳುಜುಳನೆ ಪರಿವ ನೀರಿಂ ।
ಗಳಗಳನೆನ್ನುತ್ತೆ ಪರಿವ ಸೊಬಗದು ಚೆಂದಂ ॥
ತಳತಳನೆಸವಾ ಮೀನ್ಗಳ ।
ಬಳಗಂ ನೋಡಲ್ಕೆ ನೋಟಕರ್ಗತಿ ಬಿನದಂ ೫

ಅನಿಮಿಷಕುಲಮಂ ಸಲಹು ।
ತ್ತನವರತಂ ಕಮಲರಾಜಿಯಿಂ ಶೋಭಿಸುತಂ ॥
ಮನುಮುನಿಜನರಿಂ ಸೇವಿಪ ।
ಜನನೀ, ನಿನ್ನಂತೆ ಸುಕೃತಿಯಾರೌ ಜಗದೊಳ್ ॥ ೬

ಎಲೆಗೆ ಶರಾವತಿ ಮುಳಿಸಿಂ ।
ಗಳಿಲನೆ ಪರಿದೋಡಿ ಗರ್ತಕುರುಳುವೆಯೇಕೌ ॥
ಪಳಿದನೊ ಮುಳಿದನೊ ರಮಣಂ ।
ನಳಿನಾಕರಿ ಪೇಳು ನಿನ್ನ ಮನದುಮ್ಮಳಮಂ ॥ ೭

ನಿನ್ನಯ ಪತನಮನೀಕ್ಷಿಸಿ ।
ಖಿನ್ನತೆಯಂ ಪೊರ್ದದಕಟ ನಲಿವರ್ ಜನಗಳ್ ॥
ಸನ್ನುತರೆನಿಪರ್ ಧರೆಯೊಳ್ ।
ಬನ್ನಮನನ್ಯರೊಳೆ ನೋಡಿ ನಲಿವರೆ ಮನದೊಳ್ ೮

ದೇವಿ ಶರಾವತಿ ಮನದೊಳ್ ।
ಭಾವನೆಯಂ ಮಾಡದಿರ್ ಕೃತಘ್ನರ್ ಜನರ್ಗಳ್ ॥
ತಾವಿಂತು ನಲಿವರೆನ್ನಯ ।
ನೋವಂ ಲೆಕ್ಕಿಸದೆನುತ್ತೆ ನೀಂ ಗುಣಭರಿತೇ ॥ ೯

ವೃ॥ ಭೋರೆನ್ನುತ್ತುರೆ ಬೀಳ್ವ ನಿನ್ನ ಪರಿಯಂ ನೋಡುತ್ತೆ ವಿದ್ವಜ್ಜನರ್ ।
ತೋರುತ್ತಂ ನಿಜ ಸೌಮನಸ್ಯಮನದಂ ಕಣ್ಣೀರ್ಗಳಿಂ ನಾಂದಪರ್ ॥
ನೀರೇ, ನಿನ್ನಯ ದುಃಖರಾವದೊಳೆ ದಲ್ ತಾವೇ ಕರಂ ಸೇರುವರ್ ।
ಧೀರರ್ ತಾವದರಿಂದೆ ನಿನ್ನ ಕರೆವರ್ ಜೋಗೆಂಬ ಸನ್ನಾಮದಿಂ ॥ ೧೦

ವೃ॥ ತಿಳಿನೀರಂ ಜನಕೀವೆಯೌ ನಿರುತದಿಂ ವೃಕ್ಷಾಳಿಯಂ ಕಾವೆಯೌ ।
ತಿಳಿಯಃಲ್ಮಾನಸಕೀವೆಯೌ ಹರಿಸಮುಂ ಪಾಪಾಳಿಯಂ ಪೀರ್ವೆಯೌ ॥
ಕಲಹಂಸಂಗಳ ರಾಜಿಯುಂ ಸತತಮುಂ ನೀನಲ್ಲಿಯಿಂ ಕಾಂಬೆಯೌ ।
ಕಲುಷಧ್ವಂಸಿ ಶರಾವತೀ ನಿರುಪಮೋ ಸೇನೇ ಸದಾ ವಂದ್ಯಳೌ ॥ ೧೧

# ನಾಲ್ವಡಿ ಕೃಷ್ಣಪ್ರಭು

ಕಂದ॥ ನರನಂ ಬಣ್ಣಿಪ ಕವಿಯಂ ।
ಕಿರಿಯಂ ತಾನೆಂದುಪೇಳ್ವರೆಮ್ಮ ಕವೀಂದ್ರರ್ ॥
ನರದೇಹದಿಂದ ಕೂಡಿದ ।
ಹರಿಯಂ ಪೊಗಳಿದೊಡೆ ದೋಷಮೇಂ ಬಂದಪುದೇ ॥ ೧

ವೃ॥ ಗುಣಮಣಮಿಲ್ಲದಿರ್ಪ ನರನಂ ಸಲೆಬಣ್ಣಿಪರೊಲ್ಲ ಕಬ್ಬಿಗರ್ ।
ಗುಣಯುತನಪ್ಪವಂ ಲಭಿಸೆ ತಾಮವರೇತಕೆ ಮೌನವಾಂತಪರ್ ।
ಗುಣಮಣಿಹಾರನಂ ವಿಬುಧಮಾನಿತನಂ ವರಕೃಷ್ಣದೇವನಂ ।
ತಣಿವೂಡೆಯೆನ್ನ ನಾಲಗೆಯದೇತಕೆ ದಲ್ ಸ್ತುತಿಗೆಯ್ಯದಿರ್ಪುದೋ॥ ೨

ಇಂದ್ರಾದಿ ದೇವತೆಗಳಂ ।
ಚಂದ್ರಮನಂ ಸೃಷ್ಟಿಗೆಯ್ದೊಡಂ ಫಲಮಿಲ್ಲಂ ।
ಸಾಂದ್ರಯಶನೆನಗೆ ಬರೆ ಕೃ ।
ಷ್ಣೇಂದ್ರಂ ಸಾಕೆಂದು ಪಡೆದನಿವನಂ ಬೊಮ್ಮಂ ॥ ೩

ರಾಜಿಪ ರಾಜಸಮೆತ್ತಲ್ ।
ಮೂಜಗಮಂ ದೂರಮಾಳ್ಪ ಸಾತ್ವಿಕಮೆತ್ತಲ್ ॥
ಭೂಜನವಿನುತ ಮಹೀಪತಿ ।
ಸೋಜಿಗಮಾಗುಣಗಳೆರಡುಂ ಮೊಲಿದುದು ನಿನ್ನೊಳ್ ॥ ೪

ಇಂದ್ರಿಯ ನಿಗ್ರಹಮಿಲ್ಲದೆ ।
ಯಿಂದ್ರಾದಿಗಳೆಲ್ಲ ಕಟ್ಟುಪೋದರ್ ಮೊದಲೊಳ್ ॥
ಇಂದ್ರಿಯನಿಗ್ರಹದಿಂ ಕೃ ।
ಷ್ಣೇಂದ್ರಾ ಭಲ! ಪಡೆದೆ ವಿಪುಲ ಕೀರ್ತಿಯನಿಳೆಯೊಳ್ ॥ ೫

ಸತ್ಯಂ ಜಗಕಾಧಾರಂ।
ನಿತ್ಯತ್ವಮನೀವುದದುವೆ ಸತ್ಯಮೆನುತ್ತಂ ॥
ಸತ್ಯಮನರಿದಾಚರಿಪ ವಿ।
ನುತ್ಯಂ ನಿನ್ನನ್ನನಾವನೀ ಧಾರಿಣಿಯೊಳ್ ॥ ೬

ದೊರೆಗಳ್ ಬಹುಪತ್ನಿಯರಿಂ ।
ನಿರುತಂ ಕೂಡಿರ್ಪರೆಂದು ಪೇಳ್ದ ಜನಂಗಳ್ ॥
ವರರಾಘವನಂ ನಿನ್ನಂ ।
ನಿರುಕಿಸಿ ತಾವಿಂದು ತಲೆಯ ತಗ್ಗಿಪರಿಳೆಯೊಳ್ ೭

ವರವೈರಾಗ್ಯದೆ ಜನಕಂ ।
ನಿರುಪಮವಿದ್ಯಾಭಿಮಾನದಿಂ ನವಭೋಜಂ ॥
ಕರುಣೆಯ ಗುಣದೊಳಶೋಕಂ ।
ಸುರುಚಿರ ಧರ್ಮಾಭಿಮಾನದಿಂ ಧರ್ಮಸುತಂ ॥ ೮

ಕೃಷ್ಣೇಂದ್ರ ನಿನ್ನ ಜಸಕ ಸ ।
ಹಿಷ್ಣುತೆಯುಂ ಪೊಂದಿ ಕೆಟ್ಟನಾಕುಮುದಾಪ್ತಂ ॥
ತೂಷ್ಣೀಂಭಾವದೊಳಿರದಯೆ ।
ಕೃಷ್ಣಸುಪಕ್ಷದೊಳೆ ಕುಂದುಗುಂ ಕುಮುದಾಪ್ತಂ ॥ ೯

ವೃ॥ ಪರಮ ಪಾವನ ಕೃಷ್ಣರಾಜನ ಧರ್ಮಬುದ್ಧಿಯ ಕೇಳುತುಂ ।
ಭರದಿತಾಳ್ದನನೇಕ ನೇತ್ರಮನಿಂದು ನೋಡೆ ಸುರಾಧಿಪಂ ॥
ಸುರಸತೀಕುಲಮೆಲ್ಲ , ಭೂಪನ ದಿವ್ಯನಾಮವ ಪಾಡುತುಂ ।
ಕರೆಯುತಿರ್ದಪರೈದೆ ನೇತ್ರಗಳಿಂದೆ ತಾವ್ ಸುಖಬಾಷ್ಪಮಮ್ ॥ ೧೦

# ನಂಬುವುದಾರನು ?

೧. ನಂಬುವುದು ನಂಬುವುದು ಜೀವನದೊಳು ಉತ್ತಮ ಎಂಬರಯ್ಯಾ. ನಂಬುವುದಾರನು ? ಎಂದು ಎನಗಿಂದು ಸಂದೇಹ ಬಂದಿಹುದಯ್ಯಾ. ಕಾರಣ ವೇನೆಂದು ಕೇಳಿದೊಡೆ–ನಾನು ಬಿನ್ನಪವ ಮಾಡುವೆನಯ್ಯಾ ಅವಧಾರು? ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ.

೨. ಒಮ್ಮೆ ನಾನು ನಂಬಿದೆನೆಮ್ಮ ಬಂಧುವೆಂದೊಬ್ಬನನು; ಅವನೆನ್ನ ವಂಚಿಸಿ ಮೋಸದಿ ಹಾನಿಗೀಡುಮಾಡಿದನಯ್ಯಾ, ಮತ್ತೆ ನಂಬಿದೆ ಹಿರಿಯ ಗುರುವೆಂದೊಬ್ಬನನು. ಅವನೆನ್ನ ಸೌಜನ್ಯವ ದುರುಪಯೋಗ ಮಾಡಿಕೊಂಡನಯ್ಯಾ, ಮತ್ತಲ್ಲದೆ ಆ ಜಗದಗುರು ಸಟೆ ತಟವಟಗಳಿಂದ ಎನ್ನ ವಂಚಿಸಿದನಯ್ಯಾ. ಮತ್ತೆ ಮತ್ತೆ ನಂಬಿದೆನೊರ್ವ ಹಿರಿಯ ಮಂಡಲಾಧಿಕಾರಿಯನು. ಅವನೆನ್ನ ಸೇವೆಯು ಕೈಗೊಂಡು ನಡುನೀರೊಳು ಕೈಬಿಟ್ಟನಯ್ಯಾ. ಮತ್ತೊಮ್ಮೆ ನಂಬಿದೆ ಗೆಳೆಯ ನೊಬ್ಬನನು. ಆ ಕಿರುಕುಳನು ಬಗೆ ಬಗೆಯ ದಂಡುಗಕೀಡು ಮಾಡಿದೆನಯ್ಯಾ ಲೋಕದ ಪರಿ ಇಂತಾದೊಡೆ, ನಂಬುವುದಾರನು? ನೆಚ್ಚುವುದಾರನು ಹೇಳಾ? ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ !

೩. ಇಂತಪ್ಪ ಲೋಕಜೀವನನೊದೊಳಾರ ನಂಬುವುದು ? ಆರ ನಚ್ಚುವುದು? ಎಂದೆನ್ನಮನ ಸಂದೇಹಕ್ಕೀಡಾದುದಯ್ಯಾ. ಗೆಳೆಯನೆಂದೊಡೆ, ಅವ ತುಡುಗನಯ್ಯಾ. ಹಿರಿಯನೆಂದೊಡೆ ಸ್ವಾರ್ಥಮಯನಯ್ಯಾ. ಗುರುವೆಂದೊಡೆ ವಿಷಯಲಂಪಟನಯ್ಯಾ ಬಂಧುಗಳೆಂದೊಡೆ ಬಂಧನಕೀಡುಮಾಡುವರಯ್ಯಾ. ದುರ್ದೈವಿಗೆ ಹಡೆದ ತಾಯಿ ಹೆಬ್ಬುಲಿಯಾದಂತಾಯಿತಯ್ಯಾ ಎನ್ನ ಬಾಳು. ನಂಬುವುದಾರನು? ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ ನಿನ್ನನುಳಿದು.

೪. ಹಡೆದ ತಾಯಿ ಕಡಲಿಗೆ ನೂಕಿದಳಯ್ಯಾ, ಕೂಡಿದ ಮಡದಿ ನಡುದಾರಿಯೊಳು ಕೈಬಿಟ್ಟಳಯ್ಯಾ, ನೆಂಟರಿಷ್ಟರೂ ಕಡೆಗಣಿಸಿದರಯ್ಯಾ, ಕಡೆಗೊಮ್ಮೆ ಕರುಣಿಸಿ ಮನೆಗೊಂದು ದೀಪಹಚ್ಚಿ ಕೈಹಿಡಿದು ಕಾಪಾಡಿದ ತಂದೆ ನೀನೊಬ್ಬನಲ್ಲದೆ ಬೇರೊಬ್ಬರ ಕಾಣೆನಯ್ಯಾ, ಅದುಕಾರಣ ಶರಣ ಸತಿಯಾದ

ನಾನು ಲಿಂಗಪತಿಯಾದ ನಿನ್ನನಲ್ಲದೆ ಮತ್ತಾರನೂ ನಂಬೆನು ನಚ್ಚೆನು ಮಚ್ಚೆನು ಅವಧಾರು ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರಾ !

೫. ಇಂತಪ್ಪ ಜಗದ ಅನುಭವ ಎನಗೊಂದ ಬೆಳಕನಿತ್ತುದಯ್ಯಾ. ನಂಬುವುದು ಕೂಡಲಸಂಗನ ಶರಣರ, ನಚ್ಚುವುದು ಸಂಪಾಧವನ ಭಕ್ತರ, ಮೆಚ್ಚುವುದು ಸರಸ ಸಜ್ಜನ ಸದಾಚಾರಿಗಳ, ಇಂಬುಗೊಳ್ಳುವುದು ಬಾಂಧವರೆಂದು ಲೋಕದ ತತ್ವಜ್ಞಾನಿಗಳ. ಗೆಳೆತನವ ಮಾಡುವುದು ಸರ್ವಸಂಗ ಪರಿತ್ಯಾಗಿಗಳ. ಮತ್ತುಳಿದವರ ನಂಬಿಗೆ, ಮೆಚ್ಚಿಗೆ ಎಂಬುದೆಲ್ಲಾ ಜಲಲಿಪಿ ಎಂದು ಎನ್ನ ಮನ ದೃಢವಾದುದಯ್ಯಾ, ನಂಬುವುದು ನಚ್ಚುವುದು ಎನ್ನೊಡೆಯ ಚಿದ್ಘನಲಿಂಗ ಸೋಮೇಶ್ವರನ ಎಂದು ಎನ್ನ ಚಿತ್ತನಿರ್ಮಲವಾದುದಯ್ಯಾ.

# ಕೆಳದಿಯ ರಾಣಿ

ಸೋಮಶೇಖರನರಸಿ ನಡೆನುಡಿಗಳೊಳು ಸರಸಿ।
ಭೂಮಿಯೊಳು ಬಲ್ಜಾಣೆ ಚೆನ್ನಮ್ಮ ರಾಣಿ ॥
ಪತಿಗೆ ಬೆಂಬಲವಾಗಿ ಕ್ಷಿತಿಯ ನಾಳಿದೆ ನೀನು ।
ಮತಿವಂತೆ ಪತಿಭಕ್ತೆ ಚೆನ್ನಮ್ಮರಾಣಿ ॥ ೧

ಕೈಲಿಕತ್ತಿಯಹಿಡಿದು ಶತ್ರುಗಳ ಸದೆಬಡಿದು ।
ಶೈಲಸುತೆ ಚಾಮುಂಡಿಯಂತೆ ಶೋಭಿಸಿದೆ ॥ ೨
ದಾನಧರ್ಮವಮಾಡಿ ಜ್ಞಾನಿಗಳಕಾಪಾಡಿ ।
ಮಾನಿನಿಯೆ ರಾಜ್ಯವನು ಪೊರೆದೆ ತಾಯೆ ॥ ೩

ಮೊಗಲರಾ ಅರಸನನು ಎದುರಾಗಿ ಓಡಿಸಿದೆ ।
ಜಗದೊಳಗೆ ನಿನ್ನಂತೆ ಧೀರರಾರೌ ॥ ೪
ಕನ್ನಡಮ್ಮನ ಮಗಳೆ ಚೆನ್ನಮ್ಮರಾಣಿಯರೆ ।
ಇನ್ನೊಮ್ಮೆ ಬಾರಮ್ಮ ಪೊರೆಯಲೆಮ್ಮುವನು ೫
ಮಲೆನಾಡು ವೈಸಿರಿಯೆ ನೆಲದಾಣ್ಮ ನರಗಿಣಿಯೆ ।
ಚಲವಂತೆ ಬಾರಮ್ಮ ಕನ್ನಡರ ಪೊರೆಯೆ ॥ ೬

# ಪಾಂಚಾಲ ಕೇಸರಿ

ಕಂದ|| ಲಾಲಾ ಲಜಪತರಾಯಂ |
ಭಾಳಾಂಬಕ ನಡಿಯಸೇರ್ದ ನೆಂಬುದ ಕಿವಿಯಿಂ ||
ಕೇಳುವೊಡಾವಂ ಭಾರತ |
ಬಾಲಂ ಹಾ! ಎಂದು ಸುಯ್ಯುದಿರ್ದಪನಕಟಾ! ೧

ಜನಿಸಿದ ಮೇಲೀ ಜಗದೊಳ್ |
ಮನುಜಂ ನಿಜದೇಶಸೇವೆ ಗೆಯ್ಯದೆ ಸಾಯಲ್ ||
ಜನರೊಳಗವನಿಂ ಫಲಮೇ |
ನೆನುತಂ ನೀಂ ಪೇಳ್ದ ತತ್ವಮೇಂ ಕೇವಳಮೇ ೨

ವೃ|| ಆವಾತಂ ನಿಜ ದೇಶಸೇವೆಗೆನುತಂ ಪ್ರಾಣಂಗಳಂ ತೆತ್ತಪಂ |
ಗೋವಿಪ್ರಾದಿಗಳೇಳ್ಗೆಗಾವ ನೊಲವಿಂ ನಿತ್ಯಂ ಶ್ರಮಂ ಬಟ್ಟಪಂ ||
ಆವಾತಂ ಋಜುಮಾರ್ಗದಿಂದೆ ಚರಿಸುತ್ತೆಂದುಂ ಜಸಂತಾಳ್ದಪಂ |
ದೇವಾಧೀಶ ಪದಾಬ್ಜ ಭೃಂಗನವನೇ ಲಾಲಾಜಿ ವಿದ್ವದ್ವರಂ ೩

ಆರ್ಯರ ಧರ್ಮ ರಹಸ್ಯವ |
ನುರ್ವಿಯಜನಕೊಲ್ದು ಬೋಧೆಗೆಯ್ವುದಕೆನುತಂ ||
ಆರ್ಯ ಸಮಾಜದ ಕಾರ್ಯಕೆ |
ಧೈರ್ಯದಿ ನೀಂ ಸೇವೆಗೆಯ್ದು ಮೆರೆದಪೆಯಲ್ತೇ ೪

ಪಂಚಮ ವರ್ಗದ ಜನರಂ |
ವಂಚಿಸುತಸ್ಪೃಶ್ಯರೆಂದು ಧಿಃಕರಿಸಿದರಂ ||
ಸಂಚಿತ ಕರ್ಮಗಳೆನ್ನುತೆ |
ಪಂಚಾಸ್ಯ ನಿಭಾಂಗ ನೀನೆ ಪ್ರತಿಭಟಿಸಿದಪಯ್ ೫

ವೇದದ ನಿಜ ತತ್ವಾರ್ಥವ ।
ನಾದರದಿಂ ತಿಳಿಯದಿರ್ಪ ಜಡ ವೈದಿಕರಿಂ ॥
ಮೇದಿನಿಯೊಳರಿಯಲಶಕ್ಯಮೆ ।
ಸಾಧು ಜನ ಶ್ರೇಷ್ಠ ನಿನ್ನ ಸಿದ್ಧಾಂತಗಳಂ ೬

ಅಮೆರಿಕೆಯೊಳಿರ್ದ ಕಾಲದೊ
ಳಮವಮಾ! ನೀಂ ಗೆಯ್ದ ಸಾಹಸೋದ್ಯಮದಿರವಂ ॥
ಕುಮತಿಗಳೆಂತರಿದಪರಯ್ ।
ಯಮಿಜನ ಸನ್ಮಾನ್ಯನೆನಿಪ ಲಜಪತರಾಯಾ ೭

ಲಯಪತಿ ಯೆಂಬರ್ ಕೆಲಬರ್ ।
ಲಯಪತಿ ನೀನಹುದು ಕುಜನ ವರ್ಗಕ್ಕೆಂದುಂ ॥
ಲಯಪತಿ ಯೆನಿಸಿದ ನಿನ್ನಂ ।
ಲಯಿಸಿದ ಪಾಪಿಷ್ಠನಾವ ನಾಗಿರ ವೇಳ್ಕುಂ? ೮

ಬಂದುದು 'ಸೈಮನ್ ಸಮಿತಿ'ಯು ।
ತಂದಪುದೀ ಭಾರತೀಯ ಜನ ಪದಕೀಗಳ್ ॥
ಕುಂದಂ ಮೇಣಪಮಾನವ ।
ನೆಂದರಿಪಲ್ ಶಿವನ ಬಳಿಗೆ ಪೋದಯ್ ಧೀರಾ ೯

ನಿನ್ನಂ ಪ್ರಹರಿಸಿದವನಂ ।
ಮನ್ನಿಸಿದಯ್ ಶಂಭುವವನ ಮನ್ನಿಸಲಿಲ್ಲಂ ॥
ಇನ್ನಿದರ ಗುಟ್ಟ ನರಿವಂ ।
ಪನ್ನಗ ಭೂಷಣನ ಸೂತ್ರದರ್ಥವನರಿವಂ ೧೦

ನೀನಳಿದುದರ್ಕೆ ಮರುಗೆಂ ।
ಜ್ಞಾನಿಯೆ ಕೇಳ್ ದೇಹಿಗಳ್ಗೆ ಮರಣಂ ಚರಮಂ' ॥
ಮಾನಿನಿ ಭಾರತಿಯೀಗಳ್ ।
ದೀನಸ್ವರ ಯುಕ್ತೆಯಾದಳೆಂಬುದೆ ದುಗುಡಂ ೧೧

ಧರೆಯೊಳ್ ನವಗ್ರಹಂಗಳ್ ।
ನರನಂ ಬಾಧಿಸುವುವೆಂಬುದೇಂ ಪೊಸತಲ್ಲಂ ॥
ಅರರೇ! ಗ್ರಹಸಪ್ತಕದಿಂ ।
ಹರಣವ ನಳಿದಿರ್ಪ ಸಿನ್ನ ಚರಿತೆಯೆ ಚಿತ್ರಂ ೧೨

ವೃ॥ ಅಕಟಾ ಪೊಯ್ದುದು ಸಾಲದೇಂ ಬಿದಿಯೆ ಪೇಳ್ ಶ್ರೀದಾಸನಂ
ಖ್ಯಾತನಂ ।
ಮಕುಟ ಪ್ರಾಯನೆನಿಪ್ಪವರೌನಿ ತಿಲಕನಂ ಶ್ರದ್ಧಾಖ್ಯನಂ ಮುಖ್ಯನಂ॥
ಅಕಟಾ ತೂಳ್ದುದು ಸಾಲದೇಂ ತಿಲಕನಂ ಗೋಪಾಲ ಕೃಷ್ಣಾದ್ಯರಂ ।
ಸಕಳಂಕಾತ್ಮನೆ ತೃಪ್ತಿಯಾಯ್ತೆ ನಿನಗಂ ಲಾಲಾಜಿ ಸಂಹಾರದಿಂ ೧೩

ಹೈಂದವ ಬಾಂಧವ ನೆನಿಸಿದ ।
ಬಂಧುರಮತಿ ಲಜಪತಾಖ್ಯನಳಿವಿಂದೀಗಳ್ ॥
ನೊಂದಳ್ ನಿಂದಳ್ ಭಾರತಿ ।
ಮುಂದೇಂ ಗತಿಯೆಂದು ದುಃಖ ಶರಧಿಯೊಳೆಂದುಂ ೧೪

ಅರುವತ್ತು ಮೂರು ಬರಿಸಂ ।
ನರಜನುಮದೊಳಿರ್ದು ಭೀಷ್ಮನಂದದೊಳನಿಶಂ ॥
ವರದೇಶ ಸೇವೆಯಂ ನೀಂ ।
ಪರಿಭಾವಿಸಿ ಹರನ ಸೇವೆಯೆಂದೆಸಗಿದಪಯ್ ೧೫

ಪಂಜಾಬ್ಗೆ ಸಿಹ್ಮನೆನುತಂ ।
ವ ರಾಂಜದೆ ತಾಂ ಕೆಲಬರೊಲ್ದು ಕರೆದರ್ ಮುನ್ನಂ ॥
ಅಂಜದೆ ಕರೆದಪೆ ನೀಗಳ್ ।
ಕಂಜಜ ಸೃಷ್ಟಿಯೊಳೆ ಸಿಹ್ಮನೆನತುಂ ನಿನ್ನಂ ೧೬

ಶೂರಾಗ್ರೇಸರನೆನಿಸಿದ ।
ಧೀರಂ ಶ್ರೀ ಲಜಪತಾಖ್ಯನಳಿದಿರ್ದೊಡದೇಂ ॥
ತಾರಾಪತಿ ಭಾಸ್ಕರರೀ ।
ಧಾರಿಣಿಯಿರ್ಪನ್ನ ಮಿಹುದು ಜಸದೊಡಲವನಾ ೧೭

ನೀರ್ಗುಳ್ಳೆಯ ಪೋಲ್ ದೇಹಂ ।
ಘೋರ್ಗರೆಯುವ ಮೃತ್ಯುವಿಂದೆ ನಶಿಕುಂ ಕಡೆಗಂ ॥
ಆರ್ಗಂ ಸ್ಥಿರವಲ್ಲದ ಈ ।
ಮಾರ್ಗಂ ತ್ಯಜನೀಯಮಲ್ತೆಬುಧಜನರಿಂದಂ ೧೮

# ಸರ್ ಎ. ಆರ್. ಮೊದಲಿಯಾರ್

ವೃ॥ ಶ್ರೀ ಮೈಸೂರಿನ ಮುಖ್ಯಮಂತ್ರಿ ಯೆನಿಪೊಂದೌನ್ನತ್ಯದಿಂ ಶೋಭಿಪಂ ।
**ರಾಮಸ್ವಾಮಿ**ಮಹೋದಯಂ ಬುಧನುತಂ **ಆರ್ಕಾಟು**ವಂಶೋದ್ಭವಂ।
ಧೀಮಂತಂ ಘನರಾಜಕಾರ್ಯ ನಿಪುಣಂ ಸತ್ಕೀರ್ತಿ ವಿಭ್ರಾಜಿತಂ ।
ನೇಮಂ ಕೈಮಿಗೆ ಯೆಮ್ಮರಾಜ್ಯಮನಿದಂ ಸಂಸೇವಿಪಂ ಪ್ರೀತಿಯಿಂ॥ ೧

ಭಾ॥ ಹರನ ಸಭೆಯೊಳು ನಂಡಿಕೇಶನು ।
ಹರಿಯ ಸಭೆಯೊಳು ಗರುಡದೇವನು ।
ಸುರುಪಸಭೆಯೊಳು ವರಬೃಹಸ್ಪತಿ ಶೋಭಿಪಂದದೊಳು ।
ಧರಣಿಯೊಳು ಜಯಚಾಮರಾಜನ ।
ಮರವು ಸನ್ನಿಧಿಯಲ್ಲಿ ಶೋಭಿಸು ।
ತಿರುವ **ಸರ್. ಏ. ರಾಮಸ್ವಾಮಿಯು** ವಿಜಯಿಸುಗೆ ನಿರುತಂ ॥ ೨

ಅಮೆರಿಕಾ ಇಂಗ್ಲೆಂಡು ಮೊದಲ ।
ಪ್ಪಮಿತ ದೇಶಕೆ ಪೋಗಿ ಧೈರ್ಯದಿ ।
ಸುಮಧುರ ವಾಗ್ಮಿತ್ವ ಪ್ರತಿಭಾ ರಾಜನೀತಿಗಳಿಂ ।
ಅಮಮ ಅವರೆಲ್ಲರನು ಮೆಚ್ಚಿಸಿ ।
ವಿಮಲಕೀರ್ತಿಯ ದೇಶಕಾಗಿಸಿ ।
ಶ್ರಮಿಸಿದಂ ನಿಜದೇಹವನು **ಆರ್ಕಾಟು ಮಂತ್ರಿವರಂ** ॥ ೩

# ಮನವು ಮರುಳನಂತೆ

ಭೋ॥ಧರಣಿಯೊಳಗೆ ಮನವನೇಕೆ ।
ಮರುಳನಂತೆ ಕುಣಿಸುತಿರುವೆ ।
ಪರಮ ಕಾರುಣಿಕನೆ ಶಂಭುಲಿಂಗ ಪೇಳೆಲಯ್ ॥
ಹರುಷ ಮಪ್ಪುದೇನೋ ನಿನಗೆ ।
ಚರಿಸುತಿರ್ಪ ಮನವ ನೋಡೆ ।
ದುರಿತಹರನೆ ಗಿರಿಜೆಯರಸ ಮರಣ ರಹಿತನೇ ॥ ೧

ಅಕಟ ತರಳ ತನವು ಪೋಯ್ತು ।
ಮುಕುತಿಯಿಚ್ಛೆಯಿಲ್ಲವಾಯ್ತು ।
ವಿಕಟವೆನಿಪ ಹರೆಯ ಬಂದುದೀಗಲದರೊಳು ॥
ಭಕುತಿಯೆಲ್ಲ ವನಿತೆಯರೊಳು ।
ಯುಕುತಿಯೆಲ್ಲ ವಾರ್ಜನೆಯೊಳು ।
ಶಕುತಿಯೆಲ್ಲವೆಚ್ಚವಾಯ್ತು ಚಿಂತಿಪುದರೊಳು ॥ ೨

ಒಂದುವೇಳೆ ಸಿರಿಯುತನವ ।
ನೊಂದುವೇಳೆ ಪಿರಿಯ ಜಸವ ।
ನೊಂದುವೇಳೆ ಬಯಸುತಿಹುದು ಅರಸುತನವನು ॥
ಮುಂದ ಭಾಗ್ಯಗೆಲ್ಲಿವೆಲ್ಲ
ವೆಂದು ಭಾವಿಸದಯೆ ಮನವು ।
ತಂದೆ ನಂದಿವಾಹ ನಿನ್ನಮರೆದು ಚರಿಪುದು ॥ ೩

ಲೋಲಲೋಚನೆಯರ ಕಂಡು ।
ಮೇಲನರಿಯ ದಿರ್ಪ ಮನವು ।
ಶೂಲಿಯೋಡಿ ಪೋಗುದಿರ್ಪುದೇತಕೀಶರಿ ॥

ಕಾಲಕಾಲ ನಿನ್ನ ಪದವ ।
ಬಾಲಮನವು ಬಯಸದಿಹುದು ।
ಫಾಲನಯನ ನೋಡಲೆಲ್ಲ ನಿನ್ನ ಮಾಯೆಯು ॥ ೪

ಇಂತು ವಿವಿಧ ರೀತಿಯಿಂದ ।
ಚಿಂತೆಗಳನೆ ಪಡುತಲಿಹುದು ।
ಮುಂತೆಕಾಲಗೇನ ಹೇಳಲೆಂಬ ಮಾತನು ॥
ಚಿಂತಿಸದೆಯೆ ಮನವು ಮರುಳ ।
ನಂತೆ ಕುಣಿಯುತಿಹುದು ಶಿವನೆ ।
ಕಂತುವೈರಿ ನೀನೆ ನೋಡಿ ಪೊರೆವುದೆಮ್ಮನು ॥ ೫

ಗಿಳಿಯುಮರಿಯು ಪಂಜರದೊಳು ।
ಕಲಿಯುತಿರ್ಪುದಲ್ತೆ ತನ್ನ ।
ನೊಲುಮೆಯಿಂದ ಪೊರೆದ ಧನಿಯು ಕಲಿಪ ನುಡಿಗಳ ॥
ಕಲಿವುದಂತೆ ಮಾಯೆಯಿಂದ ।
ಬಲಿದ ಮನವು ಗಿಳಿಯ ತೆರದೆ ।
ಚೆಲುವ ನೀನೆ ಕರ್ತೃನಿನ್ನಧೀನವೀಮನಂ ॥ ೬

ವೀಣೆಯೆನ್ನು ನುಡಿಪನೊರ್ವ ।
ಜಾಣನೆನಿಪ ಗಾನಗಾರ ।
ಬೀಣೆಯಿಂದ ಹೊರಟ ಸವಿಯ ದನಿಯನಾಲಿಸಿ ॥
ವೀಣೆಯನ್ನು ಪೊಗಳುತಿಹರು ।
ಬೀಣೆಗಾರನನ್ನೆ ಮರೆತು ।
ಜಾಣ ನಿನ್ನ ಮರೆಯುತಿಹುದು ಲೋಕವೀಪರಿ ॥ ೭

ಗೊಂಬೆಗಳನು ಕುಣಿಪನೋರ್ವ ।
ಗೊಂಬೆಯಾಡಿಸುವನು ನೋಡಿ ।
ಕುಂಭಿಣಿಯೊಳು ನಲಿವರೆಲ್ಲ ಜನರು ಹರುಷದಿ ॥

ಗೊಂಬೆಗಳನು ಪೊಗಳುತಿಹರು ।
ಗೊಂಬೆಗಾರರನ್ನು ಮರೆತು ।
ಸಾಂಬ ನಿನ್ನ ಮರೆಯುತಿಹುದು ಲೋಕವೀಪರಿ ॥ ೮

ನೀನೆ ನನ್ನ ಮನಸಿನೊಳಗೊ ।
ನಾನೆ ನಿನ್ನ ಮಾಯೆಯೊಳಗೊ ।
ಭಾನುನಯನ ಅರಿಯೆನಿದರ ವಿವರವೆಲ್ಲವ ॥
ನೀನೆ ನಾನೊ ನಾನೆ ನೀನೊ ।
ಹಾನಿವೃದ್ಧಿಯೆಲ್ಲವೆನಗೊ ।
ಮೌನಿವರದನೆನಿಪ ಶಂಭುಲಿಂಗ ಪೇಳೆಲಯ್ ॥ ೯

## ಕನಕದಾಸ

'ಮೋಹನ ತರಂಗಿಣಿ'ಯ ಮನತುಂಬಿ ಹಾಡಿದಯ್ ।
ಸಾಹಸದಿ ಶ್ರೀಕೃಷ್ಣನಂ ಒಲಿಸಿಕೊಂಡಿಹಯ್ ೧

'ಹರಿಭಕ್ತಿ ಸಾರ'ವನು ಹರುಷದಿಂ ವಿರಚಿಸಿದೆ ।
ನರರ ಉದ್ಧಾರಕ್ಕೆ ಮಾರ್ಗವನು ತೋರಿಸಿದೆ ೨

ನಳಚರಿತ್ರೆಯ ಹಾಡಿ ನೆಲವನುದ್ಧರಿಸಿದಯ್ ।
ಲಲನೆಯರಿಗದರಲ್ಲಿ ಉಪದೇಶವಿತ್ತಿಹಯ್ ೩

ವ್ಯಾಸರಾಯರ ಶಿಷ್ಯನಾಗಿ ಧಾರಿಣಿಯಲ್ಲಿ ।
ಲೇಸಿಂದಲಿರುವೆ ಸಮ್ಯಕ್ ಜ್ಞಾನಸಿರಿಯಲ್ಲಿ ೪

ಉಡುಪಿ ಸುಕ್ಷೇತ್ರದೊಳು ಮೃಡಸಖನನೊಲಿಸಿದಯ್ ।
ಪೊಡವಿಯೊಳಗಾಶ್ಚರ್ಯ ಕಾರ್ಯವನೆ ಎಸಗಿದಯ್ ೫

ಕನ್ನಡವನುದ್ಧರಿಸೆ ಕಾವ್ಯಗಳ ಬರೆದಿರುವೆ ।
ಚೆನ್ನಾಗಿ 'ರಾಮಧಾನ್ಯದ ಮಹಿಮೆ' ಪೇಳಿರುವೆ ೬

ಕವಿ ಕನಕದಾಸನೇ ನಿನ್ನ ಮಹಿಮೆಯ ನಾನು ।
ಭುವಿಯೊಳೆಷ್ಟೆಂದು ಬಣ್ಣಿಸಲಯ್ಯ ಘನಮಹಿಮ ೭

ಕಾಲಕಾಲ ನಿನ್ನ ಪದವ ।
ಬಾಲಮನವು ಬಯಸದಿಹುದು ।
ಫಾಲನಯನ ನೋಡಲೆಲ್ಲ ನಿನ್ನ ಮಾಯೆಯು ॥ ೪

ಇಂತು ವಿವಿಧ ರೀತಿಯಿಂದ ।
ಚಿಂತೆಗಳನೆ ಪಡುತಲಿಹುದು ।
ಮುಂತೆಕಾಲಗೇನ ಹೇಳಲೆಂಬ ಮಾತನು ॥
ಚಿಂತಿಸದೆಯೆ ಮನವು ಮರುಳ ।
ನಂತೆ ಕುಣಿಯುತಿಹುದು ಶಿವನೆ ।
ಕಂತುವೈರಿ ನೀನೆ ನೋಡಿ ಪೊರೆವುದೆಮ್ಮನು ॥ ೫

ಗಿಳಿಯುಮರಿಯು ಪಂಜರದೊಳು ।
ಕಲಿಯುತಿರ್ಪುದಲ್ತೆ ತನ್ನ ।
ನೊಲುಮೆಯಿಂದ ಪೊರೆದ ಧನಿಯು ಕಲಿಪ ನುಡಿಗಳ ॥
ಕಲಿವುದಂತೆ ಮಾಯೆಯಿಂದ ।
ಬಲಿದ ಮನವು ಗಿಳಿಯ ತೆರದೆ ।
ಚೆಲುವ ನೀನೆ ಕರ್ತೃನಿನ್ನಧೀನವೀಮನಂ ॥ ೬

ವೀಣೆಯೆನ್ನು ನುಡಿಪನೊರ್ವ ।
ಜಾಣನೆನಿಪ ಗಾನಗಾರ ।
ಬೀಣೆಯಿಂದ ಹೊರಟ ಸವಿಯ ದನಿಯನಾಲಿಸಿ ॥
ವೀಣೆಯನ್ನು ಪೊಗಳುತಿಹರು ।
ಬೀಣೆಗಾರನನ್ನೆ ಮರೆತು ।
ಜಾಣ ನಿನ್ನ ಮರೆಯುತಿಹುದು ಲೋಕವೀಪರಿ ॥ ೭

ಗೊಂಬೆಗಳನು ಕುಣಿಪನೋರ್ವ ।
ಗೊಂಬೆಯಾಡಿಸುವನು ನೋಡಿ ।
ಕುಂಭಿಣಿಯೊಳು ನಲಿವರೆಲ್ಲ ಜನರು ಹರುಷದಿ ॥

ಗೊಂಬೆಗಳನು ಪೊಗಳುತಿಹರು ।
ಗೊಂಬೆಗಾರರನ್ನು ಮರೆತು ।
ಸಾಂಬ ನಿನ್ನ ಮರೆಯುತಿಹುದು ಲೋಕವಿಪರಿ ॥ ೮

ನೀನೆ ನನ್ನ ಮನಸಿನೊಳಗೊ ।
ನಾನೆ ನಿನ್ನ ಮಾಯೆಯೊಳಗೊ ।
ಭಾನುನಯನ ಅರಿಯೆನಿದರ ವಿವರವೆಲ್ಲವ ॥
ನೀನೆ ನಾನೊ ನಾನೆ ನೀನೊ ।
ಹಾನಿವೃದ್ಧಿಯೆಲ್ಲವೆನಗೊ ।
ಮೌನಿವರದನೆನಿಪ ಶಂಭುಲಿಂಗ ಪೇಳೆಲಯ್ ॥ ೯

## ಕನಕದಾಸ

'ಮೋಹನ ತರಂಗಿಣಿ'ಯು ಮನತುಂಬಿ ಹಾಡಿದಯ್ ।
ಸಾಹಸದಿ ಶ್ರೀಕೃಷ್ಣನಂ ಒಲಿಸಿಕೊಂಡಿಹಯ್ ೧

'ಹರಿಭಕ್ತಿ ಸಾರ'ವನು ಹರುಷದಿಂ ವಿರಚಿಸಿದೆ ।
ನರರ ಉದ್ಧರಕ್ಕೆ ಮಾರ್ಗವನು ತೋರಿಸಿದೆ ೨

ನಳಚರಿತ್ರೆಯ ಹಾಡಿ ನೆಲವನುದ್ಧರಿಸಿದಯ್ ।
ಲಲನೆಯರಿಗದರಲ್ಲಿ ಉಪದೇಶವಿತ್ತಿಹಯ್ ೩

ವ್ಯಾಸರಾಯರ ಶಿಷ್ಯನಾಗಿ ಧಾರಿಣಿಯಲ್ಲಿ ।
ಲೇಸಿಂದಲಿರುವೆ ಸಮ್ಯಕ್ ಜ್ಞಾನಸಿರಿಯಲ್ಲಿ ೪

ಉಡುಪಿ ಸುಕ್ಷೇತ್ರದೊಳು ಮೃಡಸಖನನೊಲಿಸಿದಯ್ ।
ಪೊಡವಿಯೊಳಗಾಶ್ಚರ್ಯ ಕಾರ್ಯವನೆ ಎಸಗಿದಯ್ ೫

ಕನ್ನಡವನುದ್ಧರಿಸೆ ಕಾವ್ಯಗಳ ಬರೆದಿರುವೆ ।
ಚೆನ್ನಾಗಿ 'ರಾಮಧಾನ್ಯದ ಮಹಿಮೆ' ಪೇಳಿರುವೆ ೬

ಕವಿ ಕನಕದಾಸನೇ ನಿನ್ನ ಮಹಿಮೆಯ ನಾನು ।
ಭುವಿಯೊಳೆಷ್ಟೆಂದು ಬಣ್ಣಿಸಲಯ್ಯ ಘನಮಹಿಮ ೭

# ಗುಬ್ಬಿಯಲ್ಲಿ

ವೃತ್ತ॥ಆವಾತಂ ವರಗುಬ್ಬಿನಾಮ ಪುರದೊಳ್ ಸಲ್ಲೀಲೆಯಿಂದಿರ್ಪನೋ ।
ಭೂವಿಖ್ಯಾತ ಮಹಾನುಭಾವ ಗುಣದಿಂ ದೇದೀಪ್ಯನಾಗಿರ್ಪನೋ ॥
ಆವಾತಂ ಘನವೀರಶೈವ ಮತದೊಳ್ ಸಂಪೂಜ್ಯನಾಗಿರ್ಪನೋ ।
ದೇವಂ ಶ್ರೀ ಗುರುವರ್ಯ ಚೆನ್ನಬಸವಂ ಪಾಲಿಕ್ಕೆ ಲೋಕಾಳಿಯಂ॥ ೧

ಭಾ॥ ಕಾಮಲೋಭಾವಳಿಯನಟ್ಟಿದ ।
ಕಾಮಿನಿಯರುಪಟಳವ ಮೆಟ್ಟಿದ ।
ಸೋಮಧರನಪರಾವತಾರಿಯು ವಿಶ್ವವಂದಿತನು ॥
ರಾಮಣೀಯಕ ವೀರಶೈವನ ।
ನೀಮಹಿಯ ಮಾನವರಿಗರುಹಿದ ।
ವ್ಯೋಮ ಗುಬ್ಬಿಯ ಗುರುವೆ ಪೊರೆ ಸದ್ಭಕ್ತ ವೃಂದವನು ॥ ೨

ಗುಬ್ಬಿಹಕ್ಕಿಗಳೆರಡು ಭಕ್ತಿಯೊ ।
ಳುಬ್ಬಿ ಶಿವ ಪೌರಾಣಶ್ರವಣಕೆ ।
ಮಬ್ಬಿನಿಂ ಕೂಡಿರ್ದ ಸಂಜೆಯೊಳನುದಿನಂ ಬರಲು ॥
ಕಬ್ಬದೋದನು ಕೇಳಿಸುತೆ ಯಾ ।
ಗುಬ್ಬಿಗಳಿಗಮುಳ್ಳೈಕ್ಯವಿತ್ತಿಹ ।
ಸಬ್ಬೆರೆಯ ಮಲ್ಲೇಶ ಪೊರೆ ಕರ್ಣಾಟ ಮಂಡಲವ ॥ ೩

ವೀರಶೈವ ಮಹಾಪುರಾಣವ ।
ಸಾರ ಚಿಂತಾರತ್ನ ಕಾವ್ಯವ ।
ಭೂರಿ ಹರುಷದಿ ಜಗದ ಜನಗಳಿಗಾಗಿ ವಿರಚಿಸಿದ ॥
ಮಾರಮರ್ದನರೂಪನೆನಿಸುತ ।
ಪಾರಕೀರ್ತಿಯನಾರ್ಜಿಸಿದ ಕವಿ ।
ಧೀರ ಮಲ್ಲಣ ಗುರುವೆ ಪೊರೆ ವರ ಭಾರತಾವನಿಯ ॥ ೪

# ಬಾಬೂ ರಾಜೇಂದ್ರ ಪ್ರಸಾದ್

ವೃ॥ ಶ್ರೀರಾಮಂ ಗುರುಕೃಷ್ಣ ಬುದ್ಧ ಬಸವರ್‌ಸತ್ಕೀರ್ತಿ ಸಂಶೋಭಿತರ್।
ಆ ರಾಮಾಯಣ ಭಾರತಾದಿ ಸುಮಹಾ ಗ್ರಂಥಂಗಳೊಳ್‌ರಾಜಿಪರ್॥
ಧೀರೋದಾತ್ತ ಮಹಾತ್ಮಗಾಂಧಿ ತಿಲಕರ್ ಠಾಗೂರು ದಾಸಾಭಿದರ್।
ಆರಂ ಮಾತೆ ಮಹಾನುಭಾವೆಯೆನಿಸರ್ ವಂದಿಪ್ಪೆನಾಮಾತೆಯಂ॥೧

ಕಂದ॥ ಭಾರತ ರಾಷ್ಟ್ರಾಧ್ಯಕ್ಷಂ।
ಧೀರಂ ಘನಧರ್ಮನೀತಿ ಗುಣಗಣಭರಿತಂ॥
ಭೂರಿ ಯಶೌದಾರ್ಯಾನ್ವಿತ।
ನೀ ರಾಜೇಂದ್ರ ಪ್ರಸಾದ ವಿಬುಧವರೇಣ್ಯಮ್ ॥ ೨

ಕಂದ॥ ಮಾನನಿಧಿ ನಿಮ್ಮದರುಶನ।
ಮೇನೆಂಬೆಂ ಜನಕೆ ಮುದಮನಿತ್ತಪುದನಿಶಮ್॥
ಭಾನುವಿನುದಯಂ ನಿಜದಿನ್।
ತಾನೇಂ ಘನಹರ್ಷಮಿತ್ತು ಸಲಹದೆ ಜಗಮಮ್ ॥ ೩

ಭಾ॥ ಪರಮ ಕಾಂಗ್ರೆಸ್ ತತ್ವನಿಷ್ಠನು।
ಧರೆಯ ವಿಬುಧರ ಕುಲಕೆ ಮಾನ್ಯನು।
ಮೆರೆವ ಗಾಂಧಿ ಮಹಾತ್ಮ ಶಿಷ್ಯನು ಸುಜನವಂದಿತನು॥
ಹಿರಿಯ ಭಾರತಮಾತೆಪುತ್ರನು।
ಸರಸ ಪಂಡಿತ ನೆಹರು ಮಿತ್ರನು।
ಅರಿಯೆ ರಾಜೇಂದ್ರಾಭಿದಂ ಗೆಣೆಯಾರು ದೇಶದೊಳು॥೪

# ಪೂಜ್ಯ ಪಂಡಿತ ನೆಹ್ರೂ

ವೃ॥ ಶ್ರೀ ನಂದೀಶ್ವರ ಭೃಂಗಿ ವೀರ ವೃಷಭಸ್ಕಂದಾದಿ ಸಂಶೋಭಿತಃ ।
ಸಾನಂದಾತ್ರಿ ಪರಾಶರಾದಿ ಮುನಿಹೃತ್ಕಂಜಾತ ವಿಭ್ರಾಜಿತಃ ॥
ಶ್ರೀ ನಾಗೇಂದ್ರ ವಿಭೂಷಣಾಂಚಿತತನುಃ ಶ್ರೀ ಪಾರ್ವತೀವಲ್ಲಭಃ ।
ಭೂವಿಖ್ಯಾತ ಯಶೋವಿಭುಂ ಜವಹರಂ ಪಾಯಾತ್ಸದಾ ಶಂಕರಃ॥ ೧

ಕಂ॥ ಭಾರತ ಮಾತೆಯ ಬಂಧನ ।
ಮಾರಿಂದಂ ತೊಲಗಿತೆಂದು ಕೇಳ್ದೊಡೆ ಜನಗಳ್ ।
ಶೂರಂ ಧೀರಂ ವರಗಂ ॥
ಭೀರಂ ಶ್ರೀ ನೆಹ್ರು ವಿಂದಲೆನುತೊಕ್ಕಣಿಪರ್ ॥ ೨

ಮನಮೋಹಕ ಸೌಂದರ್ಯಂ ।
ಘನತಮಮೆನಿಸಿರ್ಪ ವಿಪುಲ ಪಾಂಡಿತ್ಯಂ ಮೇಣ್॥
ಜನಸೇವಾ ತಾತ್ಪರ್ಯಂ ।
ವಿನುತಾನ್ವಯ ಜವಹರಾಭಿದಂ ಗೊಲಿದಿಹುದಯ್ ॥ ೩

ಭಾ॥ ಆತನಮುಳಖ್ಯಾತ ಸುಜನೋ ।
ಪೇತ ಸದ್ಗುಣವ್ರಾತ ಬುಧಜನ ।
ಗೀತ ಭೂಸುರಜಾತ ಜವಹರಲಾಲ ನಿರ್ಭೀತ ॥
ಸಾತಿಶಯದಿಂದೆಮ್ಮ ಭಾರತ ।
ಕೀತ ಸಾಹಸದಿಂದ ಸೇವೆಯ ।
ನೋತು ಮಾಡುತಲಿರ್ಪನಿವನಂ ಪಾಲಿಸೈ ಶಿವನೇ ॥ ೪

# ಶ್ರೀ ಕೃಷ್ಣರಾಜ ನಗಲಿದಂ!

ಕಂ॥ ಆವಂ ಶ್ರೀಕೃಷ್ಣಾನ್ವಯ ।
ನಾವಂ ಸದ್ಗುಣವಿಭೂಷನನುಪಮಚರಿತಂ ॥
ಆವಂ ಕವಿಬುಧಜನನುತ ।
ನಾವಿಭು ಶ್ರೀಕೃಷ್ಣರಾಜನಗಲಿದನಕಟಾ ॥ ೧

ಭಾ॥ ಮೆರೆವ ಕರ್ಣಾಟಾಖ್ಯದೇಶದೊ ।
ಳಿರುವ ಮೈಸೂರೆನಿಪ ನಾಡಿನೊ ।
ಳರಸನಾಗಿಯೆ ಮೆರೆದು ಸದ್ಗುಣಿ ಸರಸಿಯೆಂದೆನಿಸಿ ॥
ಧರೆಯನಾಳುತೆ ಧರ್ಮಮಾರ್ಗದಿ ।
ಹರನ ಪೂಜಿಸಿ ಸತ್ಯ ಪಂಥದಿ!
ವಿರಚಿಸುತೆ ಸತ್ಕರ್ಮರಾಶಿಯ ರಾಜಋುಷಿಯೆನಿಸಿ ॥ ೨

ಇಂದುಧರ ಪದಭಕ್ತನೆನಿಸಿದ ।
ತಂದೆ ಶ್ರೀ ಕೃಷ್ಣೇಂದ್ರ ಭೂಮಿಪ ।
ನಿಂದು ಪಯಣಂಗೆಯ್ದನಕ್ಕಟ ! ಶಿವನ ಸನ್ನಿಧಿಗೆ ॥
ಮುಂದುಗಾಣರು ನಾಡಜನಗಳು ।
ತಂದೆಯಗಲಿದ ಮಕ್ಕಳಂದದೊ ।
ಳಿಂದುವಿಲ್ಲದರಜನಿಯಂದದೊಳಾಯ್ತು ನಾಡಿದು ಹಾ !॥ ೩

ಭರತಖಂಡದ ನೃಪರಗಡಣದೊ ।
ಳರಿಯೆ ಶ್ರೀ ಕೃಷ್ಣೇಂದ್ರ ಜನಪಗೆ ।
ಸರಿಯೆನಿಪ ನಿಸ್ಸಾವನೈ ಗುಣಶೀಲ ವಿದ್ಯೆಯೊಳು ॥
ಧರೆಯೊಳದರಿಂದಾಯ್ತು ಪೆಸರೀ ।
ದೊರೆಗೆ "ನಾಲ್ವಡಿ ಭೂಪ"ನೆನ್ನುತೆ ।
ಗರುವತನ ಸೂಚಕವು ಸಜ್ಜನ ಹೃದಯ ಶೋಭಿತವು ॥ ೪

ಕರುಣಿ ಶ್ರೀಕೃಷ್ಣೇಂದ್ರನುಳಿದನು ।
ಧರಣಿಯೊಳು ನಿಜಬಂಧುಮಿತ್ರರ ।
ಮರಣಮುಖದಿಂ ಪೊರಟನಾಪರಮೇಶನೋಲಗಕೆ ॥
ತಿರೆಯ ಚಂಚಲವಾದ ಸುಖಮಂ ।
ತೊರೆದು ಶಾಶ್ವತ ಮೋಕ್ಷಪದನುಂ ।
ಹರನ ಕೃಪೆಯಿಂ ಪಡೆದು ನಿರುಪಮ ದಿವ್ಯಮಾರ್ಗದೊಳು ॥ ೫

ಉ॥ ಷ॥ ಹರಭಕ್ತಿಯಕಣಿ ಶಾಂತಿಯುಮುಡು ಧೈರ್ಯದ ಭೂ ।
ಧರ ಮೇಕೋನಿಷ್ಠೆಯನೆಲೆ ವರ ಕಾರುಣ್ಯದ ।
ತರು ನೀತಿಯನೆಲೆಮನೆ ನಿರುಪಮ ಪುಣ್ಯದಪುತ್ತಳಿ ಸತ್ಯದ ಸದನಂ ॥
ಹರುಷದ ಕೆರೆ ನಿತ್ಯೌದಾರ್ಯದ ಮಂದಿರ ಸುರು।
ಚಿರಜೀವನ ಪಾವನಮನೆತನ ಗುರುತರವಹ ।
ದೊರೆತನಮೆನಿಸುವ ನಾಲ್ವಡಿ ಕೃಷ್ಣನ ಕೀರ್ತಿ ವಿರಾಜಿಪುದೆಂ-ದುಂ ಧಾರಿಣಿಯೊಳ್ ॥ ೬

ಕಂದ॥ ಮರುಗೆಂ ಶ್ರೀ ಕೃಷ್ಣೇಂದ್ರಂ ।
ತೊರೆದಂ ನಿಜರಾಜ್ಯಕೋಶಮೆಲ್ಲಮನೆನುತಂ ।
ಕೊರಗುವೆನಾನತಿ ಮನದೊಳ್ ।
ದೊರೆ ಜಯಚಾಮೇಂದ್ರಗಾದ ದುಃಖಾವಳಿಗಂ ॥ ೭

ಭೌತಿಕ ಶರೀರಮುಳಿದುದು ।
ಸಾತಿಶಯಂ ಕೀರ್ತಿದೇಹ ಮುಳಿದುದು ಧರೆಯೊಳ್ ॥
ಮಾತಿನ್ನೇತಕೆ ತೆಗೆ ಪಳಿ
ವಾತದು ಪೇಳಿಲ್ಲವೇನು ಜೀವನದಿರವಂ ॥ ೮

# 'ಜಯದೇವ ಗುರೂತ್ತಮ'

ಶ್ಲೋಕ||ಚಿನ್ಮಯಂ ಜಯದೇವಾಖ್ಯ ಯತಿರಾಜಂ ತಪೋಧನಂ
ಶಿವಯೋಗಸಮಾರೂಢಂ ತೇಜೋಮೂರ್ತಿಂ ಭಜಾಮ್ಯಹಂ ೧

ಕಂದ||ಆವಂ ಯತಿತತಿವಂದ್ಯನ
ದಾವಂ ವರವೀರಶೈವವಾರಿಧಿ ಚಂದ್ರಂ
ಆವಂ ಭಕ್ತಾಭೀಷ್ಟದ
ನಾವಿಭು ಶ್ರೀ ಮುರುಘರಾಜನೋವುಗೆ ಜಗಮಂ ೨

ವೃ|| ನೋಡಿದ ನೇತ್ರಮೇ ಸುಕೃತಿ ನಿನ್ನಯ ಮೂರ್ತಿಯನೀಧರಿತ್ರಿಯೊಳ್
ಮಾಡಿದ ಶಿಷ್ಯನೇ ಸುಕೃತಿ ನಿನ್ನಯ ಸೇವೆಯ ನುತ್ತಮರ್ಕಳೊಳ್
ಪಾಡಿದ ಭಕ್ತನೇ ಸುಕೃತಿ ನಿನ್ನಯ ಪಾವನಮಪ್ಪ ನಾಮಮಂ
ಬೇಡುವೆನಾಂ ಭವಚ್ಚರಣ ಭಕ್ತಿಯನಾವಗಮೀಶರೂಪನೇ ೩

ಕಂದ|| ಭವದೀಯ ಬೋಧಕೌಮುದಿ
ಭುವನದ ಶಿವಭಕ್ತವೃಂದದಂತಸ್ತಮಮಂ
ತವೆ ಪರಿದು ತಣಿಯಲೊಲ್ಲದೆ
ಕವಿದಿರ್ಪುದು ಬಾಹ್ಯತಮಮನುರೆ ಮುರುಘೇಂದ್ರಾ ೪

ಶ್ರೀಮನ್ಮುಕ್ತ್ಯಂಗನೆಯಂ
ಕಾಮಿಸಿಯುಂ ಕಾಮರಹಿತನೆಂದೆನಿಸಿರ್ಪೀ
ಧೀಮನ್ಮುರುಘಯತೀಂದ್ರಂ
ಭೂಮಿಗೆ ದಲ್ ತೋರ್ಪನಲ್ತೆ ಪಿರಿದಚ್ಚರಿಯಂ ೫

ರಂಜನನೆನಿಸಿಯುಮಿಳೆಗೆ ನಿ
ರಂಜನನೆನಿಸಿರ್ಪೆಯಿಃದು ಮಹತ್ತರ ಚಿತ್ರಂ
ಕಂಜಭವ ವಿನುತ ಭವಮಂ
ಭಂಜಿಪ ನಿಮ್ಮಿರವನರಿಯಲಾವಂ ಶಕ್ತಂ ೬

ವೃ॥ ಗಣಿಸದ ಮಾನ್ಯರಿಲ್ಲ ಭವದೀಯ ಪದದ್ವಯಮಂ ನಿರಂತರಂ
ತಣಿಯದ ಭಕ್ತರಿಲ್ಲ ತವಬೋಧಸುಧಾತಟನೀ ಪ್ರವಾಹದಿಂ
ಫಣಿಪತಿಭೂಷರೂಪ ಸುಮನೋಜ್ಞ ಚಿದದ್ವಯ ಮೌನಿವಂದ್ಯಸ
ದ್ಗುಣಯುತ ನಿಮ್ಮನಳ್ತಿಯೊಳೆ ಕೀರ್ತಿಪರಾವಗಮೊಲ್ದು
ಕಬ್ಬಿಗರ್ ೭
ನಿನಗೆ ವಿರಾಗಮಾತ್ತಫನಶಾಂತಿಜಿತೇಂದ್ರಿಯತ್ವಸ
ಜ್ಜನನುತಮಾರ್ಗವರ್ತನೆಗಳುಂ ಬಲಮೆಯ್ಮೆಯುಮಾಸು
ಬುದ್ಧಿಯುಂ
ಘನತರ ಶೈವಕಾವ್ಯನಿಗಮಾಗಮಕೌಶಲಮಾನಿಗರ್ವಮುಂ
ಮುನಿಜನನುತ್ಯಭಾವ ಜಯದೇವ ಗುರೂತ್ತಮ ಸಾಜಮಪ್ಪು
ದಯ್ ೮

ಕಂದ॥ ಹರಿಮುಖ್ಯ ದಿವಿಜರರಿಯರ್
ಹರಯೋಗಾಸಕ್ತರೆನಿಪ ನಿಮ್ಮಯ ಘನಮಂ
ನಿರುಪಮ ಚರಿತನೆ ನಾನೇ
ನರಿವೆನೆ ಘನ ದುರಿತವಾರ್ಧಿ ಬಡಬಾನಳನೇ ೯

ವೃ॥ ವಿದ್ಯಾರ್ಥಿವ್ರಜಮಂ ಸಮಸ್ತವಿಧದಿಂ ಪಾಲಿಪ್ಪರಾರ್ ಧಾತ್ರಿಯೊಳ್
ಹೃದ್ಯಂ ತಾನೆನಿಸಿರ್ಪ ಭವ್ಯಗುಣದಿಂ ಕೂಡಿರ್ಪರಾರ್ ಭಾವಿಸಲ್
ಉದ್ಯತ್ಪ್ರಾಣಿದಯಾಖ್ಯ ಸಂಘಕೊಲವಿಂ ಪ್ರೋತ್ಸಾಹಮಂ ಗೆಯ್ದರಾರ್
ವಿದ್ಯುದ್ರಾಜಿ ಸಮಾನತೇಜನೆವಲಂ ನಿನ್ನನ್ನರಾರ್ ಯೋಗಿಪಾ ೧೦

ಕಂದ|| ಪಂಚಾಚಾರ ಪರಾಯಣ
ಪಂಚಾನನ ರೂಪ ಸದ್ಗುಣಾಂಬುಧಿ ಚಂದ್ರಾ
ಪಂಚಾಸ್ಯ ಹೃದಯ ಭೀಕರ
ಪಂಚಾನನಪೀಠಯುತನೆ ಪೊರೆ ಮುರುಘೇಂದ್ರಾ ೧೧

ಭಾ|| ಕುಂಭಕೋಣದ 'ಪೆರಿಯ ಮಠವುಂ'
ಕುಂಭಿಣಿಯೊಳುದ್ಧರಿಸಿ ಮುದದಿಂ
ಶಂಭುನಿಭನೆಂದೆಂಬ ಕೀರ್ತಿಯ ಪಡೆದು ಪೊಡವಿಯೊಳು
ಸಾಂಬಶಿವಪದಭಕ್ತ ಜನರಿಂ
ನಂಬುಗೆಯ ವರಪಾದಪೂಜೆಯ
ನಿಂಬಿನಿಂ ಕೈಗೊಂಡೆ ಗುರು ಮುರುಘೇಂದ್ರ ಗುಣಸಾಂದ್ರ ೧೨

ಧರಣಿಪತಿ ಶ್ರೀಕೃಷ್ಣ ಭೂಪನ
ಕರುಣಿಸುತೆ ಮೈಸೂರು ನಗರಕೆ
ಹರುಷದಿಂದೈತಂದು ರೋಗಸಿದಾನ ಶೋಧನದಾ
ಪರಮ ವೈದ್ಯಾಲಯಕೆ ಧನಮಂ
ಸಿರಿದೆನಿಸಿ ಸೀನಿತ್ತು ಮುದದಿಂ
ಗುರುವರಾ ಪಡೆದಿರ್ಪೆ ಜಸಮಂ ಲೋಕಮರಿವಂತೆ ೧೩

ಕಂದ|| ಚಿತ್ರಮಯ ದುರ್ಗದೊಳು ಸ
ಚ್ಚಿತ್ರೋನ್ನತಮೆನಿಪ ಶೂನ್ಯಸಿಂಹಾಸನದೊಳ್
ಅತ್ರಿಜಧರನಿಭ ದುರಿತಾ
ಮಿತ್ರನೆ ಮೆರೆದಿರ್ಪೆಯಲ್ತೆ ಅಲ್ಲಮವಿಭುವೊಲ್ ೧೪

# ಸಾಹುಕಾರ

ಧನವ ಗಳಿಸುವುದೊಂದೆ ಮನುಜನಿಗೆ ಹಿರಿದೆಂದು
ಮನದಿ ತಿಳಿದಿರುವೆಯಾ ಸಾಹುಕಾರ
ಅನುದಿನವು ಧನಕಾಗಿ ಜನುಮವನು ಸವೆಸುವುದು
ನಿನಗೆ ಸರಿಕಂಡಿಹುದೆ ಸಾಹುಕಾರ ೧

ತನುವಿಗಾರೋಗ್ಯವು ಮನಕೆ ಶಾಂತಿಯು ಸುಖವು
ಮನುಜನಿಗೆ ಇರದಿರಲು ಸಾಹುಕಾರ
ಧನವಿದ್ದು ಫಲವೇನು ? ಗುಣವಿಲ್ಲದವನಲ್ಲಿ
ಅನುನಯದಿ ತಿಳಿಯಿದನು ಸಾಹುಕಾರ ೨

ಬಾಳುವುದು ಸುಖಕಾಗಿ ಕೂಳಿಗಾಗಿಯೆ ಅಲ್ಲ
ಬಾಳವೇ ಮೃಗ ಪಕ್ಷಿ ಕ್ರಿಮಿ ಕೀಟಗಳ್
ಕೇಳು, ಲೋಭಿತ್ವವನು ಕೀಳು ನಿಜಮನಸಿನಿಂ
ತಾಳು ಔದಾರ್ಯವನು ಸಾಹುಕಾರ ೩

ದೇಶದೊಳಗಿರುತಿರ್ಪ ಕಾಸೆಲ್ಲವನು ಗಳಿಸೆ
ಘಾಸಿಯೇತಕೆ ಪಡುವೆ ಸಾಹುಕಾರ
ದೇಶಸೇವೆಯ ಬಯಸು ಈಶನಂ ಸಂಸ್ಮರಿಸು
ಲೇಸಪ್ಪುದದರಿಂದ ಸಾಹುಕಾರ ೪

ಬಡ್ಡಿಗೆ ಬಡ್ಡಿಯನು ಗುಡ್ಡದಂದದಿ ಬಳಿಸಿ
ದಡ್ಡ ಜನಗಳನೇಕೆ ಹಾಳುಮಾಡಿ
ಬಡ್ಡಿ ಹಣವನೆ ಉಂಡು ಬಡ್ಡಿಮಗನೆಂದೆನಿಸ
ಗೊಡ್ಡು ನಿಂದೆಯಪಡೆವೆ ಸಾಹುಕಾರ ೫

# ಸರ್ ಎಂ. ವಿಶ್ವೇಶ್ವರಯ್ಯ

ತೊಂಭತ್ತು ವರುಷಗಳು ತುಂಬಿದರು ನಿನಗೀಗ
ಕುಂಭಿಣಿಯೊಳುತ್ಸಾಹದಿಂದ ದುಡಿಯುತಿಹೆ
ಕನ್ನಡಮ್ಮನ ಕುವರ ಎಮ್ಮ ಕೀರ್ತಿಯ ಮುಕುರ
ಉನ್ನತೋನ್ನತ ಮಹಿಮ ವಿಶ್ವೇಶ್ವರಾರ್ಯ ೧

ಮೈಸೂರು ಕೀರ್ತಿಯನು ದಶದಿಕ್ಕಿನೊಳು ಹರಿಸಿ
ಲೇಸಾಗಿ ಭಾರತದಿ ತಲೆಯೆತ್ತಿ ನಿಲಿಸಿ
ಮೈಸೂರು ದೇಶದೇಳ್ಗೆಗೆ ನೀನು ಗುರುವಾದೆ
ಮೋಕ್ಷಗುಂಡಂ ಮನೆಗೆ ಮಣಿದೀಪವಾದೆ ೨

ಭಾರತದಿ ಕೈಗಾರಿಕೋದ್ಯಮವ ಬಲಗೊಳಿಸಿ
ಧಾರಿಣಿಯೊಳಿದಕೊಂದು ಸ್ಥಾನವನು ಕೊಡಿಸಿ
ಶೂರತನದಿಂ ನೀನು ಹಗಲಿರುಳು ಶ್ರಮಿಸುತಿಹೆ
ಸಾರಮತಿ ವಿಶ್ವೇಶ್ವರಾರ್ಯ ಘನಧೈರ್ಯ ೩

ಭಾರತವು ಸ್ವಾತಂತ್ರ್ಯಗಳಿಸಿದೀಸಮಯದೊಳು
ಧೀರ ನಿಮ್ಮಂಥ ಪ್ರಾಜ್ಞರ ನೆರವು ಬೇಕು
ಭಾರತದ ಕಥೆಯಲ್ಲಿ ಭೀಷ್ಮನಿದ್ದಂತೆ ನೀಂ
ತೋರುತಿಹೆ ಭಾರತೀಯರ ದೃಷ್ಟಿಯಲ್ಲಿ ೪

ತಿಳಿಯಲಿಂದ್ರಿಯನಿಗ್ರಹಾದಿ ಸದ್ಗುಣದಿಂದ
ಇಳೆಯೊಳಗೆ ನೀನೋರ್ವನಾಚಾರ್ಯ ಪುರುಷ
ಅಳಿಯದಿಹ ಕೀರ್ತಿ ಗೌರವಗಳನ್ನು ಪಡೆದಿರುವೆ
ಭಳಿರೆ! ಕನ್ನಡ ತಾಯಿ ಮಗನೆ ಬಲಯುತನೆ ೫

# ಭಿಕ್ಷುಕನನ್ನು ಕುರಿತು

ಮುಖವನಳುಕಿಸಿಕೊಂಡು ತಲೆಯ ತಗ್ಗಿಸಿಕೊಂಡು
ಅಕಟಕಟ ಕೈಚಾಚಿ ಬೇಡುತಿಹೆಯೇಕೈ ? ||ಪ||

ಅರಿಯದಿಹೆ ಆತ್ಮವನು ತೊರೆದಿರುವೆ ಮಾನವನು
ನರನ ಗೌರವವನ್ನು ಮರೆತಿರುವೆ ನೀನು
ಕರಚರಣಗಳು ಇಹವು ಕಣ್ಣುಕಿವಿಗಳು ಇಹವು
ಮರುಳೆ ಯಾಚನೆಯನೇತಕೆ ಮಾಡುತಿರುವೆ? ೧

ಕುರಿಮಂದೆಯೊಳಗಿರ್ದ ಹರಿಯಂದವಾದೆಯಯ್
ಅರಿದು ಕಾಯಕನಿಷ್ಠನಾಗು ನೀನು
ಪರದೇಶಕಾಗಿಯೂ ನಿನ್ನಸಲುವಾಗಿಯೂ
ಮುರಿದು ಮೈ ಕೈಗಳನು ದುಡಿಯೊ ತಮ್ಮ ೨

ಮೃಗಪಕ್ಷಿಗಳು ತಾವು ಹಗಲೆಲ್ಲಶ್ರಮಪಟ್ಟು
ಜಗದೊಳಗೆ ದುಡಿದು ಅನ್ನವ ಗಳಿಪುವು
ಇರುವೆಗಳು ಶ್ರಮಿಸುವುವು ಜೇನುನೊಣಗಳು ತಾವು
ಧರೆಯನೆಲ್ಲವ ಸುತ್ತಿ ಜೀವಿಸುವುವು ೩

ಪ್ರಾಣಿ ಸಾಮಾನ್ಯದಿಂ ತ್ರಾಣ ಕಡಿಮೆಯೆ ನಿನಗೆ
ಮಾಣುಮಣೀ ಕೆಟ್ಟಬಾಳ ತಮ್ಮ
ಕೇಣವಿಲ್ಲದರೊಳಗೆ ದಿಟವನುಡಿದಿಹೆ ನಾನು
ಕ್ಷೋಣಿಯೊಳು ದುಡಿದುಣ್ಣು ಭಿಕ್ಷಬೇಡ ೪

ಸೋಮಾರಿತನ ಬೇಡ ಕಾಮಾರಿ ಬಿಡಬೇಡ
ನೇಮದಿಂ ಕಾಯಕವ ಮಾಡು ತಮ್ಮ
ಭೂಮಿಯೊಳು ಗೌರವದಿ ಬಾಳಲರ್ಹನು ನೀನು
ಸ್ವಾಮಿ ಶಂಕರ ನಿನ್ನ ಪೊರೆಯಲಿಹನು ೫

# ವೀರ ವಲ್ಲಭ ಭಾಯಿ

ಕಂದ॥ಆವಂ ಧೈರ್ಯಾದಿ ಹಿಮಗಿರಿ
ಯಾವಂ ಸ್ಥೈರ್ಯಾದಿ ಗುಣವಿಭೂಷಂ ಧರೆಯೊಳ್
ಆವಂ ಭಾರತದೇಶದ
ಜೀವಂ ತಾನೆನಿಸಿ ಮೆರೆದನಾ ಘನಮಹಿಮಂ ೧

ರಸೆಯೊಳ್ ವಲ್ಲಭಭಾಯಿಯು
ದೆಸೆದೆಸೆಯೊಳ್ ಕೀರ್ತಿಯಾಂತ "ಸರದಾರ್" ಬಿರುದಿಂ
ವಸುಧೆಯೊಳೆಸೆದಿರ್ದಾತಂ
ಅಸು ವಳಿದಂ ಭರತಮಾತೆಯೊಲುಮೆಯ ಪುತ್ರಂ ೨

ಕಲಿಯುಗ ಭೀಮನವಂ ದಲ್
ತಿಳಿಯಲ್ ಕಲಿ ಪರುಶುರಾಮನಪವತಾರಂ
ಚಲದೊಳ್ ಬಲಭದ್ರಂ ದಿಟ
ಮಿಳೆಯೊಳ್ ದೈವಾಂಭೂತನೆಂಬುದು ಲೋಕಮ್ ೩

ಗಾಂಧಿ ಮಹಾತ್ಮನ ಶಿಷ್ಯಂ
ಬಂಧುರಮತಿ ದುರ್ಜನಾರಿ ಸಜ್ಜನರಕ್ಷಂ
ಸಂದಂ ಪರಲೋಕವನವ
ನಿಂದಿರ್ಪಂ ಕೀರ್ತಿಕಾಯದಿಂ ಭಾರತದೊಳ್ ೪

ವರಕಾಶ್ಮೀರವನೊಲವಿಂ
ಪೊರೆದಂ ಮೇಣ್ ಹೈದ್ರಬಾದ ಜನತಿಂಥಿಣಿಯಂ
ದುರುಳರ ಕೆಯ್ಯಿಂ ಬಿಡಿಸುತೆ
ಧರೆಯೊಳ್ ಜಸಮಾಂತನಮಮ ಸಾಹಸ ಭೀಮಂ ೫

ಭಾರತದೇಶದ 'ಬಿಸ್ಮಾರ್ಕ್'
ಧೀರಂ ಶ್ರೀ ರಾಮಚಂದ್ರನನುಪಮಭಕ್ತಂ
ವೀರ ಕುಲೋತ್ಪನ್ನಂ ಹಾ
ಸಾರಗುಣಂ ವಲ್ಲಭಾಯಿ ವಿಧಿವಶನಾದಂ ೬

ಉಕ್ಕಿನ ಪುರುಷಂ ಭಾರತ
ಮಕ್ಕಳ ಸಂರಕ್ಷಕಂ ಮಹೋನ್ನತ ಭಾವಂ
ತಕ್ಕರೊಳಗ್ರಣಿಯೆನಿಸುತೆ
ಮುಕ್ಕಣ್ಣನೊಳೈಕ್ಯವಾಂತನಾ ಸರದಾರಂ ೭

ಭಾರತ ಮಾತೆಯ ಪುತ್ರಂ
ವೀರ ಶ್ರೀಯುಕ್ತನಮಿತ ಸದ್ಗುಣಪಾತ್ರಂ
ಸೇರಿದನಮಮಾ ವಿಧಿಯಂ
ಧೀರವರಂ ವಲ್ಲಭಾಯಿ ಸುಜನೋತ್ತಂಸಂ ೮

ಸಾಮಾದಿ ರಾಜನೀತಿಯ
ನೀಮಹಿಯೊಳ್ ಸಮಯವರಿತು ನಡೆಸುತೆ ಚದುರಂ
ಭೂಮಿಯೊಳೆಮ್ಮಯ ದೇಶಂ
ಕ್ಷೇಮದೊಳಿರುವಂತೆ ಗೆಯ್ದನಾ ಪುಣ್ಯಾತ್ಮಂ ೯

ವಲ್ಲಭ ಪೋದುದಕೆನಗಿನಿ
ತಿಲ್ಲಂ ದುಗುಡಮಿಳೆಯೊಳಳಿವು ನಿಸರ್ಗಂ
ಸಲ್ಲಲಿತ ನೆಹರು ಹೃದಯಂ
ಕಲ್ಲೋಲಮದೆನಿಸಿತೆಂಬುದಿದುವೇ ದುಗುಡಂ ೧೦

# ಕೃತಘ್ನ

ಪ್ರಾಣಿಗಳೊಳುತ್ತಮನು ಎನಿಸಿ ಜನುಮಿಸಿದಯ್ ।
ಶ್ವಾನಕಿಂ ಕಡೆಯಾದ ಗುಣವ ಗಳಿಸಿದೆಯಯ್ ॥ ೧ ॥

ಉಂಡಮನೆಗೆರೆಡ ಬಗೆವುದರಿಂದ ನೀನು ।
ಖಂಡಿತವ ಮಾಡಿದಯ್ ಮಾನವತ್ವವನು ॥ ೨ ॥

ಅನ್ನವಿಟ್ಟವರಿಂಗೆ ಪ್ರಾಣವೀವುದಲಾ ।
ಕುನ್ನಿಯದರಿಂದ ನೀಂ ಕ್ಷುದ್ರನೆನಿಸಿದೆಲಾ ॥ ೩ ॥

ತೆಂಗಿನಾಮರವನ್ನು ನೋಡಿಲ್ಲವೇನೊ ?
ಮಂಗಮಾನಿಸ ಬುದ್ಧಿ ಬರಲಿಲ್ಲವೇನೊ? ॥ ೪ ॥

ಆನೆ ಕುದುರೆಗಳೆಲ್ಲ ಸಾಕಿದರಿಗಾಗಿ ।
ಏನೆಂಬೆ ಅಸುವಿತ್ತು ಜಸಗಳಿಸಲಾಗಿ । ॥ ೫ ॥

ಓ! ಕೃತಘ್ನನೆ ಏಕೆ ಹುಟ್ಟಿದೆಯೊ ನೀನು
ಕಾಕುಮತಿ ಮಾನವತೆಗನುಚಿತನು ನೀನು ॥ ೬ ॥

ಕಲ್ಲುಮರ ಗಿಡಗೆಂಟಿ ಲೋಕೋಪಕಾರಿ ।
ಖುಲ್ಲನರ ನೀನೊರ್ವಲೋಕಾಪಕಾರಿ ॥ ೭ ॥

ತಾಳು ಪಶ್ಚಾತ್ತಾಪ ಚಿತ್ತಶುದ್ಧಿಯೊಳು ।
ಕೇಳು ವಿಬುಧರ ನುಡಿಯ ನೆರಡು ಕಿವಿಗಳೊಳು ॥ ೮ ॥

# ದುಂಬಿ

ಹಾರುಹಾರೆಲೆ 'ದುಂಬಿ' ನಿರ್ಮಲಾಕಾಶದೊಳು ।
ತೋರಿದಂದದಿ ನಿನ್ನ ಮನಕೆ ದಾರಿ ।
ಸಾರು ನಂದನಗಳನು ಮೇಣು ಉಪವನಗಳನು ।
ಹೀರು ಬಗೆಬಗೆ ಪುಷ್ಪಗಳ ಮಧುವನು ॥೧॥

ನಿನ್ನ ಝೇಂಕಾರವನು ಕಬ್ಬಿಗರು ಬಣ್ಣಿಸಲಿ ।
ನಿನ್ನ 'ಬಂಡುಣಿ'ಎಂದು ಕರುಬರೆನಲಿ ।
ಉನ್ನತೋನ್ನತಮಾರ್ಗದೊಳು ನೀನು ಹಾರುತ್ತ ।
ಚೆನ್ನಾಗಿ ಕುಸುಮ ರಸ ಕುಡಿದು ಸುಖಿಸು ॥೨॥

ಕಾಡಿನೊಳು ಸಂಚರಿಸು ಕೇಡಿಗರು ತುಂಬಿರುವ ।
ನಾಡಿನೊಳು ನೀನಿರದೆ ಓಡುಓಡು
ಎಲ್ಲಿ ಪುಷ್ಪಗಳಿಹವೊ ಎಲ್ಲಿ ಸೌರಭವಿಹುದೊ ।
ಅಲ್ಲಿ ನೀ ನಿರು ತುಂಬಿ ಸ್ವಚ್ಛಂದದಿ ॥೩॥

ಅಂದು ಕಣ್ವಾಶ್ರಮ ದೊಳಾಶಕುಂತಲೆಯನು ।
ಸಂದೇಹಿಸದೆ ಪುಷ್ಪವೆಂದು ನೀನು ।
ಚುಂಬಿಸಿದ ಕಾರಣವೆ ದುಷ್ಯಂತ ನೃಪವರನು ।
ಕುಂಭಿಣಿಯೊಳೈತಂದು ನಿನ್ನ ಕಾಡಿಸಿದ ॥೪॥

ಕವಿ ಕಾಳಿದಾಸನೊರ್ವನೆ ಅರಿದ ನಿನ್ನಿರವ ।
ಬುವಿಯೊಳಿನ್ನಾರಿಂದ ತಿಳಿಯಲಹುದು ?
ಗಗನ ಮಾರ್ಗದಿ-ಚರಿಪ ಗಂಭೀರ ಷಟ್ಪದಿಯ ।
ಜಗದೊಳೆಂತರಿವರಯ್ ಪಾಮರಗಣ ॥೫॥

ವಿವಿಧ ಪುಷ್ಪಗಳಿಂದ ಮಧುವ ಸಂಗ್ರಹಿಸುತ್ತೆ ।
ಕವಿ ಜನರ ಹೊಗಳಿಕೆಗೆ ಪಾತ್ರವಾಗಿ ।
ಸುವಿಲಾಸದಿಂ ನೀನು ಜೇನುಕೊಡವನು ಕಟ್ಟಿ ।
ಬುವಿಗೊಂದು ಉಪಕಾರ ವೆಸಗಿ ಬಾಳು ॥೬॥

ರಸಿಕ ವೃಂದವು ನಿನ್ನ ಝೇಂಕಾರವನು ಕೇಳಿ ।
ರಸೆಯೊಳಗೆ ಆನಂದ ಪಡುತಿರುವುದು ।
ಪಶುಗಳಿಂತರಿವವಯ್ ನಿನ್ನ ಇಂಚರವನ್ನು
ರಸಮಧುರವೆಂದೆನಿಪ ಜೇನಿನಿರವ ॥ ॥೭॥

ಸರಸಿಯೊಳು ತಾವರೆಯು ಬಾವಿಯೊಳು ನೈದಿಲೆಯು ।
ಅರಳು ಮಲ್ಲಿಗೆ ಪಾರಿಜಾತ ಜಾಜಿ ।
ಇರುತಿರ್ಪ ತಾಣವನು ಅರಿದು ನಿನ್ನಂದದೊಳು ।
ಚರಿಸಿ ತರುವವರಾರು ಜೇನು ಸಿರಿಯ ॥೮॥

ಹೊಗಳಿಕೆಗೆ ತೆಗಳಿಕೆಗೆ ಹಿಗ್ಗಿ ತಗ್ಗದೆ ನೀನು ।
ಜಗದಿ 'ಚಂಪಕ'ವೊಂದನುಳಿದು ಬಾಳು ॥
ಹರುಷದಿಂ ಕವಿ ಜನರು ನಿನ್ನನೋಲೈಸುವರು ।
ಸರಸ ಜೇಂಗೊಡವನ್ನು ಮರೆವರಾರು? ॥೯॥

ಮಧುಕರನೆ ಜೇಂಗೊಡವ ನೊದಗಿಸಿಹೆ ಲೋಕಕ್ಕೆ ।
ಸದುಹೃದಯರಿಂದರ ಸವಿಯನು ತಿಳಿಯುಗೆ ।
ಧರೆಯ ರೋಗಿಗೆ ನೀನು ಸಂಜೀವನವನಿತ್ತು ।
ಚಿರಜೀವಿ ಯೆನಿಸಿರ್ಪೆ ವೈದ್ಯರಿಂದ ॥೧೦॥

ಕನ್ನಡದ ಕವಿವರರು ನಿನ್ನ ನಾಮದ ಬಲದಿ ।
ಚೆನ್ನಾಗಿ ರಚಿಸಿದರು ಕಾವ್ಯಗಳನು ।
ನಿನ್ನ ಝೇಂಕಾರವನು ನಿನ್ನ ಜೇಂಗೊಡವನು
ನಿನ್ನ ಸದ್ಗುಣಗಳನು ಹಾಡಿಹರಸಿ ॥೧೧॥

ಜೇಂಗೊಡದ ರುಚಿಯನು ಮಧುರತಮ ಗಾನವನು ।
ನೀಂ ಗಡಾ ! ತಿಳಿನೆಯಿಾ ಧಾರಿಣಿಯೊಳು ।
ಬೆಂಗದಿರನುದಯದಾನಂದ ಭಾಗ್ಯವನೆಂತು ।
ಕಂಗಳಿಲ್ಲದ ಕುರುಡ ತಿಳಿವನವನು ? ॥೧೨॥

ಮಂದಗಮನೆಯ ರಪ್ಪಸುಂದರಾಂಗಿಯರಾ ।
ಕಂದುಗುರುಳನು ಕುರಿತು ಕವಿಗಳೆಲ್ಲ
ಇಂದಿಗುಂ ಕರೆವರಯ್ ಭೃಂಗ ಕುಂತಳವೆಂದು ।
ಸಂದೇಹವಿಲ್ಲದಯೆ ಕಾವ್ಯಗಳೊಳು ॥ ೧೩ ॥

ಮದನ ಭೂಪತಿಯ 'ಸಿಂಜಿನಿ' ಎಂಬ ಬಿಳ್‌ಜಸವ ।
ನೊದವಿಸಿದ ಕವಿಜನಕೆ ಶರಣು ಬಂದು ॥
ಮದನಾರಿ ಪರಮೇಶನಂಘ್ರಿ ಕಮಲಗಳನು ।
ಮುದದಿಂದ ಲೋಲೈಸಿ ಬಾಳು ಮುಂದು ॥ ೧೪ ॥

ಭೃಂಗ, ಪರಮೆಯು, ತುಂಬಿ, ಷಟ್‌ಪದಿಯು, ಮಧುಕರವು ।
ಮಂಗಲಾಶೀರ್ವಾದ ಗೆಯ್ವುವೆಂದು ।
ಜಂಗಮಸ್ಥಾವರದೊಳೆಲ್ಲೆಲ್ಲಿ ಯುಂ ನೀನು
ಕಂಗೊಳಿಸಿ ಬಲು ಜಸವ ಪಡೆದೆ ಯಿಂದು ॥ ೧೫ ॥

ಐಕಮತ್ಯವ ಜನಕೆ ಬೋಧಿಸುವ ನಿನ್ನಿರವು ।
ಲೋಕದೊಳು ಮಾದರಿಯು ನಮ್ಮ ಜನಕೆ ।
ಬೇಕು ನಿನ್ನಯ ನಿಷ್ಠೆಯೆಲ್ಲಕಾಲದೊಳುಂ ।
ಶೇಖರಿಪ ಸಾಹಸವು ಪ್ರಗತಿಗಾಗಿ ॥ ೧೬ ॥

ಸಂಘ ಜೀವನವನ್ನು ಚೆನ್ನಾಗಿ ಬೋಧಿಸುವೆ ।
ಭೃಂಗವೇ ನಿನ್ನಮಲಬಾಳ್ವೆಯಿಂದ ॥
ಮಂಗಮನುಜರು ನೋಡಿಕಲಿಯದಿಪರೇತಕೋ ।
ತುಂಗವೆನಿಸುವ ನಿನ್ನ ಸದ್ಗುಣಗಳಂ ॥ ೧೭ ॥

ವೇದಶಾಸ್ತ್ರವು ನಿನ್ನ ಮಧುವ ಹೊಗಳುತ್ತಿಹುದು ।
ಬಾಧಿಸುವ ರೋಗಗಳ ನಾಶಿಪುದುದು ।
ಸಾಧು ಜನಗಳ ಪ್ರೀತಿಪಾತ್ರನಹ ನಿನ್ನನು ।
ಮೇದಿನಿಯೊಳಾರಿಂದ ಮರೆಯಲಹುದು ? ॥ ೧೮ ॥

ಅನುಬಂಧ-೧

# ಕನ್ನಡ ಕಾವ್ಯಗಳಲ್ಲಿ 'ತುಂಬಿ'ಯ ಹಿರಿಮೆ

೧. ಆತುಮ ತುಂಬಿ, ಪರಮಾತುಮ ತುಂಬಿ, ತುಂಬಿನೋಡಾ
ಗುಹೇಶ್ವರ ಲಿಂಗಕೆರಗಿ ನಿಬ್ಬೆರಗಾಗಿತ್ತು **ತುಂಬಿ** ನೋಡಾ ||

**—ಪ್ರಭು ದೇವರು**

೨. ಕೂಡಲಸಂಗಮ ದೇವಾ ನಿಮ್ಮ ಚರಣಕಮಲದೊಳಗಾನು **ತುಂಬಿ,**
**ಭ್ರಮರಂಗೆ** ಪರಿಮಳದ ಬಂಡುಂಬ ಚಿಂತೆ,

**—ಬಸವೇಶ್ವರ**

೩. **ಮರಿದುಂಬಿ**ಯಾಗಿ ಪುಟ್ಟುವುದು ನಂದನದೊಳ್
ಬನವಾಸಿ ದೇಶದೊಳ್,

**ಮರಿದುಂಬಿ** ಯಿಂಚರಮೆ ಸಾಮರವಕ್ಕೆಣೆಯಾಗೆ,
**ಪೆಣ್ದುಂಬಿಯ** ಜಿಂಕು ತುಂಬಿಗಳಸಂ ಕೈವರ್ಸ ಚೆಲ್ವನೆ
ಪೋಲ್ತಿರ್ದುವು,

**ಭ್ರಮರಂಗಳ** ಗೀತಶಾಲೆ,....ಪಾಡುತಿರ್ಪ ಕಿವ್ಯಂದಂ

**—ಆದಿಪಂಪ**

೪. **ತುಂಬಿಯ** ಕೂಟಮೆ ನೋಟಮಾದ ನಂದನವನಲಕ್ಷ್ಮಿ,
ಭ್ರಾಜಿತ ಧೂಮಮಾಳೆ **ಮಧುಪಾವಳಿ,**

**—ಪೊನ್ನಕವಿ**

೫. **ಭೃಂಗ** ಚಲಾಲಕಂ ಮನಂಗೊಳೆ,
ಧೂಮಾಳಿಯಂ **ಭೃಂಗ**ರಾಜಿ

**—ರನ್ನಕವಿ**

೬. ಜೇಂಗೊಡದಂತೆ, ಝೇಂಕರಿಕ **ತುಂಬಿ**ಗಳಿಂಚರದಂತೆ,
ಮಿಳಿರ್ದಾಡುವ **ತುಂಬಿ**ಯ ಬಂಬಲಂತೆ,

**—ಆಂಡಯ್ಯ**

೭. ಪಲೊಯುನೇಕೆ **ತುಂಬಿಗಳ** ನಾಕೆ ತೆಸಂಬೊ ಕೆದಾಡೆ,
ಕೆಯ್ಯುಪೂಮಾಲೆಗೆ **ಭೃಂಗಮಾಲೆ** ಮೊರೆದೆಯ್ದೆ,

**—ಅಭಿನವ ಪಂಪ**

೮. **ತುಂಬಿಯ** ಬಣ್ಣಮುಂ ಕಱಯನೆಯ್ದಿಲ ಬಣ್ಣಮುಂ,
**ತುಂಬಿಗೆ** ಪರಿಮಳಮುಂ ಕೊಂಡು ಕೊನೆದು ಪೇಳ್ವವೊಲಕ್ಕುಂ

**—ನೇಮಿ ಚಂದ್ರ**

೯. **ಮಧುಪಾವಳೀ** ನಿನದನೊಂಬಕಳಧ್ವನಿಯಿಂ,
**ತುಂಬಿಯ** ಗೀತಶಾಲೆ........

**—ರುದ್ರಭಟ್ಟ**

೧೦. ಕುಸುಮಮಾಲೆಯಲ್ಲಿಗೆ ವರ**ಮಧುಕರ**ನೆಯ್ದಿ ಬರ್ಪತೆರದಿಂ;
ಪುಂಡರೀಕಪ್ರಕರ ಪರಿಮಳಾಸಕ್ತ **ಭ್ರಮರಕು**ಲವಿಲಸಿತಮಾದ
ಕಾಸಾರ ತಟದೊಳ್,

ಮಾಳತಿಯೊಳ್ ಬಂಡುಂಬ **ಮದಾಳಿಯುಂ** ಅಳಿಮಾಲೆ
ಯೆರಗಿ ಬಂಡುಂಬವೊಲ್,
**ಮಧುಕರ** ಮಂಡಲಿಗೆ ಮಾರಭೂಪನ ಬಿರುದಿನೇಳ್ಗಿಗಳ
ಗೀತ ಗೋಷ್ಠಿಯನೀವ ನೂತನ ಗಾಯಕಿಯುರಿಂ

**—ಹರೀಶ್ವರ**

೧೧. ಪರಿಮಳಕೆ ಬಂದು ಮುಸುರಿದ **ನೊಣಂಗಳು** ಕೂಡೆ ಪರವಸಂ ಬಟ್ಟು
ಘೋಂಕೆಂಬ **ಅಳಿಗಳಿಂ** ಕಾಲೊಳಗೆ ಕಟ್ಟೆಂದು,
ಓರಂತೆ ಕಾಡುವಳಿಯುಂಡಲೆಗೆ ಕಂದಿದುವು ಕೈರವಂ,

**—ರಾಘವಾಂಕ**

೧೨. ಭ್ರಮದ್ **ಭ್ರಮರೀ**ವಿಲಾಸ ವಿರುತಿಹಿತವಾದ ಮಂಗಲಾಶೀರ್ವಾದ
ಮಂತ್ರಂ

**—ಪದ್ಮಣಾಂಕ**

೧೩. ಉದ್ಗಮಂ **ಎಳೆದುಂಬಿ**ಗೊಂದಿನಿತರೋಚಕಮುಪ್ಪದೆ ?

**—ಸೋಮ ರಾಜ**

೧೪. ಮಿಳಿರ್ದಾಡುವ **ತುಂಬಿಯು** ಬಂಬಲಂತೆ,
ಮಗಮಗಿಸಲರಂ **ತುಂಬಿ**ಯರಿವಂತೆ ಉಳಿದ ಪುಳುಗಳರಿವುವೆ ?

**—ಕವಿ ಸುರಂಗ**

೧೫. **ಭೃಂಗಾಳಿಗಳ್** ಝೇಂಕಾರಮಂ ಗೆಯ್ದು ವಾನಂದ ವಿಸ್ಮ್ರಡಿಸಲು

**—ಲಕ್ಷ್ಮಕವಿ**

೧೬' ಮಂಜುಳ ಧ್ವನಿಗುಡಿಪ **ಪರಮೆ**
ಪರಮೆಗೆ ಸಂತಸಂ ಜನಿಸಿದರಲ್

**—ವಿರೂಪಾಕ್ಷ ಪಂಡಿತ**

೧೭. ಬೇರೆಸಿಸಿ ಮಿಸುಗುವಲರ್ಗಳ್
ಬೀರುವ ನರುಗಂಪಿನೊಳ್ ವಿಶೇಷಮನರಿವಂತಾರಡಿ,
**ಪೆಣ್ದುಂಬಿಯು** ಗಾನದಂತೆ, ಜೇಂಗೊಡದಂತೆ,
ಝೇಂಕರಿಪ **ತುಂಬಿಗಳಿಂಚರ**ದಂತೆ, ಪಾರದ ತುಂಬಿಯುಂ,

**—ಷಡಕ್ಷರ ದೇವ**

೧೮. ಸಿರುತಮಂಜುಳ ಶಬ್ದದಿಂದ ಕಿವಿಗಿಂಪಾಗಿ, ಸುಮನೋನುರಾಗದಿಂ
ಪ್ರಚುರಮಾಗಿ ಚರಿಸುತಿಹ ಸುಲಲಿತ ಷಟ್ಪದಿಗಳ್
ಎಡೆವಿಡದೆ ಝೇಂಕಸರಿದಿರ್ಪುವೆ ?

**—ಕವಿ ಲಕ್ಷ್ಮೀಶ**

೧೯. ವನಜಮಧ್ಯದೊಳಿನಸುಂ ಸಿಲ್ಕಿದ **ಮದಾಳಿ** ಯೇನೊಪ್ಪಿದುದೋ ?
ಉಲ್ಲಾಸಿಪ ನೈದಿಲೊಳ್ ಮೆರೆಪಳಿಧ್ವನಿ ಮಂಗಳ ವಾದ್ಯಮಾಗೆ

**—ಅಭಿನವ ಕಾಲಿದಾಸ**

೨೦. **ತುಂಬಿಗಳ**ಲ್ಲದೆ ಪೂವೊಳ್ ಮಗಮಗಿಸುವ ಕಂಪಂ
ಕಡಂದುರೇನರಿದಪುದೆ ?

**—ಕನ್ನಡ ಜಾಣ**

೨೧. **ಮದಭೃಂಗೀ**ಗೀತ ಗೀತಂ ವಿಠಹಿ ವಿಘಾತಂ
ಮಿಳಿರ್ಪುವು ಬಂಡುಂಡು ಪಾರುವಳಿ ಮಾಳಿಕೆಗಳ್

**—ಅಗ್ಗಳ ಕವಿ**

೨೨. ಅಳಿಮಾಲಾ ರುಚಿಯಂ ಪಳಂಚಲೆವ ಕನ್ನೈದಿಲ್

—ಕವಿ ಜನ್ನ

೨೩. ಸಮುಳಿಸ ಮಳಿಕುಳನೆಂಬಾ ।
ದಮೆ ತತ್ಸಂಗತಿಯನುಳಿದು ಸುಮಸ್ಸಂತಾ ॥
ನಮನೆಯ್ದಿ ಸತತ ಮತ್ತ್ಯ !
ತ್ರಮರಂದದಿ ನೆಸೆವುದಲ್ಲಿ ಚಂಪಕ ನಿಕರಂ

—ಕವಿ ವಾಣೀವಲ್ಲಭ

೨೪. ಮೊಗೆದುಣ್ಣೈ ಮಧುಮಂ ಮಲೀನವಪು ದಾನಂಗೊಳ್ಳೆ ಮಾತಂಗಜಾ।
ತಿಗಳೊಳ್ ಮಾಣದೆ ಮಾಳ್ಪೆಪುಷ್ಪಲತಿಕಾ ಸಂಭೋಗಮಂ
ನಿನ್ನೊಳಾ ॥
ವಗುಣಂ ಪೊರ್ದದು ಪೋಗು ಭೃಂಗಯೆನುತಂಕೈಸನ್ನೆಗೆಯ್ವಂತೆ ಸಂ।
ಪಗೆ ಚೆಲ್ವಾಯ್ತು........................................................

—ಮಧುರ ಕವಿ

೨೫. ನರುಸುಯ್ಗುಂಪಿಗೆರಪಳಿಗಳುರವಣಿಗೆ,
ಕಾಸಾರದೊಳ್ ಘನ ಮಾಗರಲ್ದಾ
ತೊಡಂಬೆಯ ಸಡಿಲ್ದ ಕೀಟನಿಕಾಯ ಮುರಿಸಾರ್ದ ಪರಮೆಗಳು

ಗುಬ್ಬಿ ಮಲ್ಲಣಾರ•

೨೬. ಸುಮನೋವಿಹಾರಿಯೆ, ಸುರಸಝೇಂಕಾರಿಯೇ,
ನಿನ್ನ ಸ್ವಾಗತಕೆ ಬನ ನಳನಳಿಸಿವೆ ।
ಅಲರಲರ ಎಸಳುಗಳು ನರುಗಂಪ ಪಸುಳೆಗಳು
ನಿನ್ನ ದರ್ಶನಕಹಾ ! ಕಳಕಳಿಸಿವೆ ।

- 'ತುಂಬಿ'

ಅನುಬಂಧ:-೨

## ಕಠಿಣ ಶಬ್ದಗಳ ಅರ್ಥ

ಅಗ್ರಣಿ—ಮೊದಲಿನವ, ಶ್ರೇಷ್ಠ ಮನುಷ್ಯ
ಅನಿಮಿಷ—ಮೀನು, ಈ ಹೆಸರಿನ ಒಬ್ಬಯೋಗಿ
ಅನಿಶಂ—ಯಾವಾಗಲೂ
ಅಲಂಪು—ಸುಖ, ಸಂತೋಷ
ಅಸಮಾಕ್ಷ—ಶಿವನು (ಸೂರ್ಯ, ಚಂದ್ರ, ಅಗ್ನಿ ಎಂಬ ಮೂರು ಕಣ್ಣುಳ್ಳವನು.)
ಅಘಟು—ಪರಾಕ್ರಮ, ಬೀರತನ
ಅರ್ಥಿಪರ್—ಬೇಡುವವರು, ಯಾಚಕರು
ಅನ್ನೆಯ—ಅನ್ಯಾಯ, ಅಧರ್ಮ
ಅಷ್ಟಮದ—ಎಂಟು ಮದಗಳು (ಅನ್ನ, ರೂಪ, ಕುಲ, ಹಣ, ಪ್ರಾಯ, ಅಧಿಕಾರ, ಸ್ತ್ರೀ ಮತ್ತು ವಿದ್ಯೆ)
ಅಳಿ—ದುಂಬಿ, ಜೇನುಹುಳ,
ಅರಾತಿವ್ರಾತ ವಿಚ್ಛೇದಕಂ—ಶತ್ರುಗಳ ಸಮೂಹವನ್ನು ನಾಶಮಾಡತಕ್ಕವನು
ಆದ್ಯರ್—ಹಿರಿಯರು, ಶರಣರು, ಪುರಾತನರು
ಇಂಚರ—ಇಂಪಾದ ಧ್ವನಿ (ಇನಿದು—ಸ್ವರ)
ಇಂದುಧರ—ಶಿವ (ಇಂದು-ಚಂದ್ರನನ್ನು, ಧರ-ತಲೆಯಲ್ಲಿ ಅಲಂಕರಿಸಿದವನು.)
ಇಂಬುಗೊಳ್ಳು—ಆಶ್ರಯಪಡೆ
ಒಡ್ಡೋಲಗ—ರಾಜರ ದರ್ಬಾರು
ಒಸಗೆ—ಕೀರ್ತಿ, ಶುಭ ವರ್ತಮಾನ
ಒಕ್ಕಣಿಸು—ಹೇಳು, ತಿಳಿಸು
ಓಲೈಸು—ಸೇವಿಸು
ಕೆಚ್ಚು—ಪರಾಕ್ರಮ, ನಿಷ್ಠೆ
ಕಮಲಜ—ಬ್ರಹ್ಮ (ಕಮಲ—ತಾವರೆಯಲ್ಲಿ, ಜ—ಹುಟ್ಟಿದವನು)
ಕುಜ—ಮರ (ಕು—ಭೂಮಿಯಲ್ಲಿ, ಜ—ಹುಟ್ಟತಕ್ಕದು)

ಕುನ್ನಿ—ನಾಯಿ, ಶ್ವಾನ
ಕರುನಾಡು—ಕರ್ಣಾಟಕದೇಶ (ಕರು—ಎತ್ತರವಾದ ನಾಡು—ದೇಶ)
ಕೃತಘ್ನ—ತನಗಾದ ಉಪಕಾರವನ್ನು ಮರೆಯುವವನು
ಕುನ್ನಿಮಾನಿಸರು—ಕೀಳು ಮನುಷ್ಯರು
ಕೊಂಪೆ—ಮನೆ, ವಾಸಸ್ಥಳ
ಕರುಬರು—ಹೊಟ್ಟೇ ಕಿಚ್ಚಿನವರು, ಅಸೂಯಾಪರರು,
ಗಿರಿ ಗಹ್ವರ—ಬೆಟ್ಟಗಳಲ್ಲಿರುವ ಗವಿಗಳು
ಕಬ್ಬಿಗ—ಕವಿ, (ಕಬ್ಬ—ಕಾವ್ಯವನ್ನು, ಇಗ—ಮಾಡುವವನು)
ಕುಮುದ—ಕನ್ನೈದಿಲೆ
ಕಲುಷಧ್ವಂಸಿ—ಪಾಪವನ್ನು ಕಳೆಯತಕ್ಕುದು (ಶರಾವತೀ ನದಿ)
ಕುಂಭಿಣಿ—ಭೂಮಿ
ಕೌಮುದಿ—ಬೆಳುದಿಂಗಳು
ಕೊಂಕು—ವಕ್ರವಾದ, ನೇರವಲ್ಲದ
ಕಾಂಚೀಧಾಮ—ನಡುಪಟ್ಟಿ, ಒಡ್ಯಾಣ, ಡಾಬು
ಗೇಯೆ—ಹೊಗಳಲ್ಪಟ್ಟವಳು
ಚರಮ—ಮರಣ, ಮನುಷ್ಯನ ಕಡೆಯ ಅವಸ್ಥೆ
ಚಕ್ರಾಯುಧ—ಸುದರ್ಶನ, ಶ್ರೀ ಮಹಾವಿಷ್ಣುವಿನ ಕೈಯ್ಯಲ್ಲಿರುವ ಆಯುಧ
ಜಸ—ಕೀರ್ತಿ, ಯಶಸ್ಸು
ಜಿತದೈತೇಯೆ—ಪಾರ್ವತಿ (ಜಿತ-ಗೆಲ್ಲಲ್ಪಟ್ಟ, ದೈತೇಯೆ-ರಾಕ್ಷಸರನ್ನುಳ್ಳವಳು)
ಜನಪದ—ದೇಶ, ರಾಷ್ಟ್ರ
ಜಂಗಮ—ಸಂಚರಿಸತಕ್ಕಪ್ರಾಣಿ(ವೀರಶೈವರಲ್ಲಿ ಪೂಜ್ಯರಾದವರು, ಅತಿಥಿಗಳು)
ತಿರೆ—ಭೂಮಿ, ನೆಲ
ತುರುಕುಲ—ಗೋವುಗಳ ಗುಂಪು
ದಂದುಗ—ಕಷ್ಟ, ತೊಂದರೆ
ದುಗುಡ—ಚಿಂತೆ, ವ್ಯಸನ
ದಾನವಾಂತಕ—ವಿಷ್ಣು (ದಾನವ—ರಾಕ್ಷಸರಿಗೆ, ಅಂತಕ—ಶತ್ರುವಾದವನು)

ಧರ್ಮಚಕ್ರ—ಅಶೋಕನ ಲಾಂಛನ (ಇಂದು ಸ್ವತಂತ್ರ ಭಾರತದ ಲಾಂಛನ)
ದಿನಮಣಿ—ಸೂರ್ಯ (ದಿನ—ಹಗಲಿನಲ್ಲಿ, ಮಣಿ—ಪ್ರಕಾಶಿಸತಕ್ಕವನು.)
ದುಂದುಭಿ—ಜಯದ ಕಹಳೆ (ದೇವತೆಗಳ ಮಂಗಳವಾದ್ಯ)
ನಂದಿವಾಹನ—ಶಿವ (ನಂದಿಯು ಅವತಾರ, ವೃಷಭನನ್ನು ವಾಹನವಾಗುಳ್ಳವ)
ನಾಡಮಾತು—ಜನರು ಬಾಯಿಗೆ ಬಂದಂತೆ ಆಡುವ ಮಾತುಗಳು
ನಳಿನಾಕ್ಷ—ವಿಷ್ಣು, ತಾವರೆಗಣ್ಣ(ನಳಿನ-ತಾವರೆ, ಅದರಂತೆ ಅಕ್ಷ-ಕಣ್ಣುಳ್ಳವ)
ನಂಜುವೆಣ್ಣು—ಪೂತಿನಿ (ವಿಷದ ಹಾಲಿನಿಂದ ಶ್ರೀ ಕೃಷ್ಣನನ್ನು ಕೊಲ್ಲಲು ಪ್ರಯತ್ನಿಸಿದವಳು)

ನಿರಂಜನ—ಮಾಯೆ, ಮೋಹಗಳನ್ನು ಗೆದ್ದ ಸಂನ್ಯಾಸಿ, ವಿರಕ್ತ
ಪದ್ಮಪಾಣಿ—ತಾವರೆಯಿಂದ ಕೂಡಿದ ಕೈಯ್ಯುಳ್ಳವನು. (ಅಜಂತದಲ್ಲಿರುವ ಬುದ್ಧನ ಒಂದು ಚಿತ್ರ.)
ಪುಂಡರೀಕಾಕ್ಷಸಖ—ಶಿವ (ಪುಂಡರೀಕ-ಬಿಳಿಯ ಕಮಲ, ಅಕ್ಷ-ಅದರಂತೆ ಕಣ್ಣುಳ್ಳವ ವಿಷ್ಣು, ಸಖ-ಅವನಿಗೆ ಸ್ನೇಹಿತನಾದ ಶಿವ)

ಪಾಂಥಜನರ್—ಪ್ರಯಾಣಿಕರು
ಪಾಂಚಾಲ ಕೇಸರಿ—ಪಂಚಾಲದೇಶದ ಸಿಂಹ, ಲಜಪತ ರಾಯರು
ಫಾಲನಯನ—ಪರಮೇಶ್ವರ, (ಫಾಲ—ಹಣೆಯಲ್ಲಿ, ನಯನ—ಕಣ್ಣುಳ್ಳವನು)
ಪ್ರಹರಿಸು—ಹೊಡೆ, ಶಿಕ್ಷಿಸು
ಗ್ರಹಸಪ್ತಕ—ಏಳು ಜನಗಳಿಂದ ಕೂಡಿದ ಸೈಮನ್ ಸಮಿತಿ
ದುರಿತಾಮಿತ್ರ—ಪಾಪದ ಶತ್ರು (ದುರಿತ-ಪಾಪ-ಅಮಿತ್ರ-ವೈರಿ)
ಪಂಚಾಸ್ಯ—ಸಿಂಹ, ಮೃಗರಾಜ (ವಿಶಾಲವಾದ ಮುಖವುಳ್ಳದು)
ಪಂಚಾಚಾರ—ಐದು ಆಚಾರಗಳು (ಶಿವಾಚಾರ, ಗಣಚಾರ, ಲಿಂಗಾಚಾರ, ಸದಾಚಾರ, ಭೃತ್ಯಾಚಾರ ಎಂಬ ವೀರಶೈವ ಧರ್ಮದ ಐದು ನಡೆವಳಿಕೆಗಳು.)

ಬನ್ನ—ಕಷ್ಟ, ಅಡಚಣೆಗಳು
ಬನ್ನಿ—ಒಂದು ಜಾತಿಯ ಮರ (ಈ ವೃಕ್ಷವು ಪೂಜಾರ್ಹವಾದುದು)
ಬಂಡುಣಿ—ದುಂಬಿ (ಬಂಡು-ಹೂವಿನ ರಸ, ಉಣಿ-ಅದನ್ನು ಊಟಮಾಡ ತಕ್ಕುದ್ದು)

ಬಿಸಪಂದ—ಆಶ್ಚರ್ಯ, ಅಚ್ಚರಿ
ಬೊಮ್ಮ—ಬ್ರಹ್ಮ, ಸೃಷ್ಟಿಕರ್ತ
ಬೆಂಗದಿರ—ಸೂರ್ಯ (ಬಿಸಿಯಾದ ಕಿರಣವುಳ್ಳವನು)
ಬೆಡಗು—ಚೆಲುವು, ವೈಖರಿ
ಭುಜಗಭೂಷ—ಶಿವ (ಹಾವನ್ನು ಆಭರಣವಾಗಿ ಉಳ್ಳವನು)
ಭೂಮಿಜೆ—ಸೀತಾದೇವಿ (ಭೂಮಿಯಲ್ಲಿ ಹುಟ್ಟಿದವಳು)
ಭವಮಾಲೆ—ಜನನ-ಮರಣ, ಹುಟ್ಟು-ಸಾವು
ಭಿಕ್ಷು-ಬೌದ್ಧ ಸಂನ್ಯಾಸಿ
ಮಧುಕರ—ದುಂಬಿ (ಮಧು—ಜೇನನ್ನು, ಕರ–ಉಂಟುಮಾಡತಕ್ಕದು
ಮಂಡಲಾಧಿಕಾರಿ—ಒಂದು ಪ್ರಾಂತದ ಅಧಿಪತಿ
ಮಂದಗಮನೆ—ಸ್ತ್ರೀ (ಮೆಲ್ಲಮೆಲ್ಲನೆ ನಡೆಯುವವಳು)
ಮರೀಚಿ—ಬಿಸಿಲು ಕುದುರೆ (ನೀರಿನ ಭ್ರಾಂತಿಯುಂಟುಮಾಡತಕ್ಕದು)
ಮುಕುರ—ಕನ್ನಡಿ, ದರ್ಪಣ
ಯುಗಪುರುಷ—ಮಹಾಪುರುಷ, ಅವತಾರ ಪುರುಷ
ಯಾದವ ವಂಶ—ಯದುರಾಜರಿಂದ ಆದ ಕುಲ (ಮೈಸೂರು ರಾಜರ ವಂಶ)
ಲಾಕುಳ—ಯೋಗದಂಡ
ಲೋಗರ್—ಜನಗಳು
ವಾಣಿ—ಸರಸ್ವತಿ, ನುಡಿವೆಣ್ಣು
ವಾಸ್ತುಶಿಲ್ಪ—ಕಲ್ಲಿನಿಂದ ವಿಗ್ರಹಗಳನ್ನೂ ದೇವಾಲಯಗಳನ್ನೂ ಕಡೆಯುವ ಹಾಗೂ ಕಟ್ಟುವ ಕಲೆ
ಶೂನ್ಯ—ಸುಳ್ಳು, ಅಸತ್ಯ (ವಚನಶಾಸ್ತ್ರದಲ್ಲಿ 'ಶೂನ್ಯ' ಎಂಬ ಶಬ್ದಕ್ಕೆ 'ಶಿವ' ಎಂಬ ಅರ್ಥವುಂಟು)
ಷಡ್ವರ್ಗ—ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ಬಗೆಯ ಶತ್ರುಗಳು
ಷಟ್ಪದಿ–ಆರು ಕಾಲುಳ್ಳದು ಭೃಂಗ; ಅಥವಾ ಕನ್ನಡ ಛಂದಸ್ಸಿನ ಭೇದ
ಸಬ್ಬೆರೆಯ—ಸರ್ವೇಶ್ವರ (ಸಬ್ಬ—ಎರೆಯ)

ಸುರಮುನಿ—ದೇವಲೋಕದ ಋಷಿ (ನಾರದಾದಿಗಳಂತೆ)
ಸರಿದೊರೆ—ಸಮಾನ
ಸಿಡಿಲ ಮರಿಗಳು—ಶೂರರು, ಧೀರರು
ಸುವರ್ಣ ಪರ್ಯಂಕ—ಚಿನ್ನದ ಮಂಚ
ಸುಕೃತರು—ಪುಣ್ಯಶಾಲಿಗಳು
ವಿಡಂಬನೆ—ತಿರಸ್ಕಾರ
ಭಾನುನಿಭ—ಸೂರ್ಯನಿಗೆ ಸಮಾನನಾದವನು
ಭೈಮಿ—ದಮಯಂತಿ (ಭೀಮರಾಜನ ಮಗಳು)
ಮಹಿ—ಭೂಮಿ, ನೆಲ
ಬೆಳ್ಪಸ—ಕೀರ್ತಿ (ಬಿಳಿಯ ಬಣ್ಣವು ಕೀರ್ತಿಯ ಗುರುತು)
ಸವಿಗಾರರು—ರಸಿಕರು, ಸಹೃದಯರು
ಸಗ್ಗ—ಸ್ವರ್ಗ, ದೇವಲೋಕ
ಸಿಂಜಿನಿ—ಬಿಲ್ಲಿಗೆ ಕಟ್ಟುವ ದಾರ, ಅಥವಾ ಹಗ್ಗ
ಸ್ಥಾವರ—ಬಿದ್ದಲ್ಲೇ ಬಿದ್ದಿರುವ ವಸ್ತು
ಹರಿ—ಸಿಂಹ, ವಿಷ್ಣು, ಕುದುರೆ, ಕಪ್ಪೆ ಇತ್ಯಾದಿ
ಹರಿಗೀತೆ—ಕೃಷ್ಣಗೀತೆ, ಭಗವದ್ಗೀತೆ

# ಒಪ್ಪೋಲೆ

—:★:—

| ಪುಟ. | ಪಂಕ್ತಿ. | ತಪ್ಪು. | ಒಪ್ಪು. |
|---|---|---|---|
| ೩ | ೧೬ | ಪುತ್ತೊಂದು | ಮತ್ತೊಂದು |
| ೬ | ೧೦ | ಭಿತಿಚಿತ್ರ | ಭಿತ್ತಿ ಚಿತ್ರ |
| ೯ | ೧೩ | ಸರಸ್ವತಿ | ಸುಸರಸ್ವತಿ |
| ೯ | ೧೪ | ಮಂಗಳಲಾಂಗಿ | ಮಂಗಳಾಂಗಿ |
| ೧೩ | ೬ | ಭಾರದಿಂದ | ಭಾವದಿಂದ |
| ೧೮ | ೨ | ಮ:ರಗುತ | ಮರುಗುತ |
| ೨೪ | ೧೬ | ಈ ಎನ್ನ | ಎನ್ನ |
| ೨೫ | ೯ | ಆಯುಸು | ಆಯುವು |
| ೩೧ | ೧೨ | ಸೋಡ | ಸೋಡು |
| ೩೫ | ೨೦ | ಬಿಸವಂದ | ಬಿಸವಂದ |
| ೩೮ | ೧೨ | ವನು | ಯನು |
| ೪೦ | ೧೩ | ವಸುವಿನ | ವಸ್ತುವಿನ |
| ೬೦ | ೧೮ | ಪ್ರೊರೆದೆ | ಪ್ರೊರೆದೆ ನೀಂ |
| ೬೪ | ೨೨ | ಸುಮಧುರ | ಸುಮುಮಧುರ |
| ೬೭ | ೨೪ | ಭುನಿ | ಬುನಿ |
| ೭೮ | ೧೬ | ಮಾಣುಮಣೀ | ಮಾಣುಮಾಣೀ |
| ೨೯ | ೧೦ | ನಪವಕಾರಂ | ನಪರವತಾರಂ |
| ೭೯ | ೧೨ | ದೈವಾಂಭೂತ | ದೈವಾಂಶಭೂತ |

